ಸಂಬಂಧಿಸಿದ ಅಂಕಣದಲ್ಲಿ ಅಭ್ಯರ್ಥಿಯು ಪಡೆದಿರುವ ಪದವಿಯ ಬಗ್ಗೆ ಕಡ್ಡಾಯವಾಗಿ ನಮೂದಿಸತಕ್ಕದ್ದು. ತಪ್ಪಿದಲ್ಲಿ ಅಂತಹ ವಿನಾಯಿತಿಗಳನ್ನು ಪರಿಗಣಿಸಲಾಗುವುದಿಲ್ಲ.

(ಬಿ) ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 76, ದಿನಾಂಕ 10ನೇ ಜನವರಿ 1987ರ ಅನುಸಾರವಾಗಿ ಸರ್ಕಾರಿ ಆದೇಶ ಸಂಖ್ಯೆ 649 ಇಎನ್ ಟಿ 57, ದಿನಾಂಕ 23ನೇ/25ನೇ ಫೆಬ್ರವರಿ 1959ರ ಅನುಸಾರವಾಗಿ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯಿಂದ ನಡೆಸಲಾದ ಅರಣ್ಯ ಇಲಾಖಾ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳಿಗೆ ಅರಣ್ಯ ಪರೀಕ್ಷೆಯ ಪತ್ರಿಕೆ–2 ರಲ್ಲಿ ತೇರ್ಗಡೆಯಾಗುವುದರಿಂದ ವಿನಾಯಿತಿ ನೀಡಲಾಗಿದೆ.

**10. ಪ್ರವೇಶ ಪತ್ರ:**

**ಅರ್ಜಿಗಳನ್ನು ಆನ್‌ಲೈನ್ ಮುಖಾಂತರ ಸಲ್ಲಿಸುತ್ತಿರುವುದರಿಂದ ಪ್ರವೇಶಪತ್ರಗಳನ್ನು ಅಂಚೆ ಮೂಲಕ ಕಳುಹಿಸಲಾಗುವುದಿಲ್ಲ.**

ವೇಳಾ ಪಟ್ಟಿಯನ್ನೊಳಗೊಂಡ ಪ್ರವೇಶ ಪತ್ರವನ್ನು ಪರೀಕ್ಷೆಗೆ ಮೊದಲು ಆಯೋಗದ ವೆಬ್‌ಸೈಟ್‌ನಲ್ಲಿ ಅಳವಡಿಸಲಾಗುತ್ತದೆ. ಅಭ್ಯರ್ಥಿಗಳು ಪ್ರವೇಶಪತ್ರಗಳನ್ನು Down load ಮಾಡಿಕೊಂಡು ನಿಗದಿತ ಪರೀಕ್ಷಾ ಕೇಂದ್ರದಲ್ಲಿ ಪರೀಕ್ಷಾ ವೇಳೆಯಲ್ಲಿ ಪ್ರವೇಶಪತ್ರವನ್ನು ಹಾಜರುಪಡಿಸತಕ್ಕದ್ದು. ಸದರಿ ಪ್ರವೇಶ ಪತ್ರಗಳನ್ನು ಅಭ್ಯರ್ಥಿಗಳು ಜೋಪಾನವಾಗಿಟ್ಟಿರಬೇಕು ಮತ್ತು ಅವುಗಳನ್ನು ತಮ್ಮ ಸೇವಾ ದಾಖಲೆಗಳಲ್ಲಿ ನಮೂದು ಮಾಡುವುದಕ್ಕಾಗಿ ಆಯೋಗದಿಂದ ನೀಡಲಾದ ತೇರ್ಗಡೆ ಪ್ರಮಾಣ ಪತ್ರದೊಂದಿಗೆ ಸಕ್ಷಮ ಪ್ರಾಧಿಕಾರಿಯ ಮುಂದೆ ಹಾಜರುಪಡಿಸತಕ್ಕದ್ದು. ಯಾವುದೇ ಸಂದರ್ಭದಲ್ಲಿ ಪರೀಕ್ಷೆಗಳು ಮುಗಿದ ನಂತರ ಪ್ರವೇಶ ಪತ್ರದ ನಕಲನ್ನು ನೀಡಲಾಗುವುದಿಲ್ಲ.

**11. ಪಠ್ಯಪುಸ್ತಕಗಳು:**

ಪಠ್ಯಪುಸ್ತಕಗಳನ್ನು ಉಪಯೋಗಿಸಬಹುದಾದ ಪತ್ರಿಕೆಗಳಿಗೆ ಅಭ್ಯರ್ಥಿಗಳು ಸರ್ಕಾರದಿಂದ ಪ್ರಕಾಶಿಸಲ್ಪಟ್ಟ ಪಠ್ಯಪುಸ್ತಕಗಳನ್ನು ಮತ್ತು ಖಾಸಗಿ ಪ್ರಕಾಶಕರಿಂದ ಪ್ರಕಾಶಿಸಲ್ಪಟ್ಟ ಪುಸ್ತಕಗಳನ್ನು ಸರ್ಕಾರಿ ಪ್ರಕಾಶಿತ ಪುಸ್ತಕಗಳ ಮಾದರಿಗೆ ಯಾವುದೇ ರೀತಿಯ ತದ್ವಿರುದ್ಧವಾಗಿಲ್ಲದಿದ್ದರೆ ಮತ್ತು ಕರ್ನಾಟಕ ಉಚ್ಚ ನ್ಯಾಯಾಲಯದ ದಿನಾಂಕ 3ನೇ ಡಿಸೆಂಬರ್ 1991ರ ಆದೇಶಕ್ಕೆ ಅನುಗುಣವಾಗಿದ್ದರೆ ಅಂತಹ ಪಠ್ಯಪುಸ್ತಕಗಳನ್ನು ಮಾತ್ರ ಪರೀಕ್ಷಾ ಕೇಂದ್ರಗಳಲ್ಲಿ ಉಪಯೋಗಿಸಬಹುದಾಗಿರುತ್ತದೆ. ಇತರೆ ಯಾವುದೇ ಖಾಸಗಿ ಪ್ರಕಾಶಕರ ಪಠ್ಯ ಪುಸ್ತಕಗಳನ್ನು ನಿಷೇಧಿಸಲಾಗಿದೆ.

**12. ತೇರ್ಗಡೆಗೆ ಗಳಿಸಬೇಕಾದ ಅಂಕಗಳು:**

ಎ) ಯಾವುದೇ ಸೇವಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಲು ಒಂದು ಪತ್ರಿಕೆಯ ಪರೀಕ್ಷೆಗೆ ಕನಿಷ್ಠ ಶೇಕಡ 40 ಅಂಕಗಳನ್ನು ಪಡೆದಿರಬೇಕು. ಒಂದಕ್ಕಿಂತ ಹೆಚ್ಚು ಪತ್ರಿಕೆಗಳಿದ್ದಲ್ಲಿ ಪ್ರತಿ ಪತ್ರಿಕೆಯಲ್ಲಿ ಕನಿಷ್ಠ ಶೇಕಡಾ 35 ಮತ್ತು ಒಟ್ಟು ಎಲ್ಲಾ ಪತ್ರಿಕೆಗಳಿಂದ ಕನಿಷ್ಠ ಶೇಕಡಾ 40 ಅಂಕಗಳನ್ನು ಪಡೆದಿರಬೇಕು. ವಿನಾಯಿತಿ ಕೋರಿದ ಬಿ.ಕಾಂ. ಹಾಗೂ ಕಾನೂನು ಪದವೀಧರರು, ಹಾಗೂ ಲೋಕಸೇವಾ ಆಯೋಗವು ನಡೆಸುವ ವಿಷಯದ ಪತ್ರಿಕೆಗಳಲ್ಲಿ ಕನಿಷ್ಠ ಶೇಕಡ 40 ಅಂಕಗಳನ್ನು ಪಡೆದಿರಬೇಕು.

ಬಿ) ಯಾವುದೇ ಪರೀಕ್ಷೆಯಲ್ಲಿ ನಿಗದಿಪಡಿಸಿದ ಗರಿಷ್ಠ ಅಂಕಗಳಲ್ಲಿ ಶೇಕಡ 60ಕ್ಕಿಂತ ಕಡಿಮೆ ಇರದಷ್ಟು ಅಂಕಗಳನ್ನು ಪಡೆದು ಉತ್ತೀರ್ಣರಾದಂತಹ ಅಭ್ಯರ್ಥಿಗಳನ್ನು ಪ್ರಥಮ ದರ್ಜೆ ಯಲ್ಲಿ ಉತ್ತೀರ್ಣರಾಗಿರುವುದಾಗಿ ಫಲಿತಾಂಶ ಘೋಷಿಸಲಾಗುವುದು.

ಸಿ) ಯಾವುದೇ ಪರೀಕ್ಷೆಯು ಒಂದಕ್ಕಿಂತ ಹೆಚ್ಚು ಪತ್ರಿಕೆಗಳನ್ನೊಳಗೊಂಡಿದ್ದು ಅಭ್ಯರ್ಥಿಯು ಆ ಪರೀಕ್ಷೆಯಲ್ಲಿ ಅನುತ್ತೀರ್ಣನಾದರೂ ಅದೇ ವಿಷಯದ ಇತರ ಪತ್ರಿಕೆಗಳಲ್ಲಿ ಆ ಪತ್ರಿಕೆಗೆ ನಿರ್ದಿಷ್ಟಪಡಿಸಲಾದ ಗರಿಷ್ಟ ಅಂಕಗಳಲ್ಲಿ ಶೇಕಡಾ 60ಕ್ಕಿಂತ ಕಡಿಮೆ ಇರದಷ್ಟು ಅಂಕಗಳನ್ನು ಪಡೆದಿದ್ದಲ್ಲಿ ಅಂತಹವರನ್ನು ಆ ಪತ್ರಿಕೆಯಲ್ಲಿ ವಿನಾಯಿತಿ ಹೊಂದಿರುವವರೆಂದು ಪರಿಗಣಿಸಲಾಗುವುದು. ಅಂತಹವರು ಪರೀಕ್ಷೆಗಳ ಫಲಿತಾಂಶ ಘೋಷಿಸಿದ ನಿಯಾಮಾನುಸಾರ ದಿನಾಂಕದಿಂದ ಎರಡು ವರ್ಷಗಳೊಳಗೆ ಆ ಪರೀಕ್ಷೆಯ ಉಳಿದ ಪತ್ರಿಕೆಗಳಲ್ಲಿ ತೇರ್ಗಡೆಯಾಗಲು ಅವಶ್ಯವಿರುವಷ್ಟು ಅಂಕಗಳನ್ನು ಪಡೆದು ತೇರ್ಗಡೆಯಾಗತಕ್ಕದು. ಇಲ್ಲದಿದ್ದಲ್ಲಿ ಅಂತಹ ವಿನಾಯ್ತಿಯು ರದ್ದಾಗುವುದು.

**13. ಹಾಜರಿ ಪ್ರಮಾಣ ಪತ್ರಗಳು:**

ಪರೀಕ್ಷೆಗೆ ಹಾಜರಾದ ಬಗ್ಗೆ ಹಾಜರಾತಿ ಪ್ರಮಾಣಪತ್ರ ಪಡೆಯಬಯಸುವ ಅಭ್ಯರ್ಥಿಗಳು ಸಂಬಂಧಪಟ್ಟ ಪರೀಕ್ಷಾಕೇಂದ್ರದ ಮೇಲ್ವಿಚಾರಕರಿಂದ ಅದನ್ನು ಪರೀಕ್ಷಾ ದಿನದಂದೇ ಪಡೆಯತಕ್ಕದ್ದು. ಹಾಜರಿ ಪ್ರಮಾಣಪತ್ರವನ್ನು ಆಯೋಗದ ಕಛೇರಿಯಿಂದ ಯಾವುದೇ ಸಂದರ್ಭದಲ್ಲೂ ನೀಡಲಾಗುವುದಿಲ್ಲ.

**14. ಕನ್ನಡಭಾಷಾ ಲಿಖಿತ ಪರೀಕ್ಷೆಗೆ ಮೌಖಿಕ ಪರೀಕ್ಷೆ:**

(1) ಕನ್ನಡ ಭಾಷಾ ವಿಷಯದ ಲಿಖಿತ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳಿಗೆ ಮೌಖಿಕ ಪರೀಕ್ಷೆಯನ್ನು ಆಯೋಗದ ಕೇಂದ್ರಕಛೇರಿ, ಪಾರ್ಕ್‌ಹೌಸ್, ಬೆಂಗಳೂರು–560001 ಇಲ್ಲಿ ಹಾಗೂ ಆಯೋಗದ ಪ್ರಾಂತೀಯ ಕಛೇರಿಗಳಾದ ಬೆಳಗಾಂ, ಗುಲ್ಬರ್ಗಾ, ಮೈಸೂರು ಹಾಗೂ ಶಿವಮೊಗ್ಗ ಕೇಂದ್ರಗಳಲ್ಲಿ ನಡೆಸಲಾಗುವುದು.

**ಸೂಚನೆ:** (1) ಯಾವುದೇ ಸರ್ಕಾರಿ ನೌಕರನು/ನೌಕರಳು ಕನ್ನಡಭಾಷಾ ಲಿಖಿತ ಪರೀಕ್ಷೆಯಲ್ಲಿ ತೇರ್ಗಡೆಯಾಗದ ಹೊರತು ಕನ್ನಡ ಮೌಖಿಕ ಪರೀಕ್ಷೆಗೆ ಅರ್ಹರಾಗುವುದಿಲ್ಲ.

(2) ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 81 ಎಸ್‌ಎಸ್‌ಆರ್ 81, ದಿನಾಂಕ 6ನೇ ಜೂನ್ 1981ರ ಮೇರೆಗೆ ಗೃಹರಕ್ಷಕ ಸಂಸ್ಥೆಯ ಸೈನಿಕರು ಕನ್ನಡ ಭಾಷಾ, ಮೌಖಿಕ ಪರೀಕ್ಷೆಯಲ್ಲಿ ಮಾತ್ರ

ತೇರ್ಗಡೆಯಾಗತಕ್ಕದ್ದು. ವೇತನ ಮುಂಬಡ್ತಿ ಪಡೆಯುವ ಮತ್ತು ಸೇವಾ ಸ್ಥಿರೀಕರಣದ ಉದ್ದೇಶಗಳಿಗೆ ಕನ್ನಡ ಭಾಷಾ ಲಿಖಿತ ಪರೀಕ್ಷೆಯ ಬದಲಾಗಿ ಗರಿಷ್ಠ 50 ಅಂಕಗಳನ್ನು ನಿಗದಿಪಡಿಸಿರುವ ಕನ್ನಡ ಮೌಖಿಕ ಪರೀಕ್ಷೆಯಲ್ಲಿ ಮಾತ್ರ ಅವರು ತೇರ್ಗಡೆ ಹೊಂದಬೇಕಾಗಿರುತ್ತದೆ.

(3) ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 3 ಎಸ್‌ಎಸ್‌ಆರ್ 82, ದಿನಾಂಕ 30ನೇ ಆಗಸ್ಟ್ 1982ರ ಮೇರೆಗೆ ಅಂಧರಾಗಿರುವ ಮತ್ತು ಕೆಲಸಕ್ಕೆ ಓದುವುದು ಮತ್ತು ಬರೆಯುವುದು ಅವಶ್ಯವಿಲ್ಲದ ಸರ್ಕಾರಿ ನೌಕರರಿಗೆ ಸ್ಥಿರೀಕರಣದ ಮತ್ತು ವಾರ್ಷಿಕ ವೇತನ ಮುಂಬಡ್ತಿಗಳನ್ನು ಪಡೆಯುವ ಉದ್ದೇಶಗಳಿಗಾಗಿ ಕನ್ನಡ ಭಾಷಾ ಲಿಖಿತ ಸೇವಾ ಪರೀಕ್ಷೆಯಲ್ಲಿ ತೇರ್ಗಡೆಯಾಗುವುದರಿಂದ ವಿನಾಯಿತಿಸಲಾಗಿದೆ. ಆದರೆ ಅವರು ಕನ್ನಡ ಭಾಷಾ ಮೌಖಿಕ ಪರೀಕ್ಷೆಯಲ್ಲಿ ತೇರ್ಗಡೆಯಾಗತಕ್ಕದ್ದು.

**15.** (ಅ) ಆಯೋಗದ ಆದೇಶ ಸಂಖ್ಯೆ ಇ.ಪ(2)3774/94–95/ಪಿಎಸ್‌ಸಿ ದಿನಾಂಕ 18ನೇ,ಫೆಬ್ರವರಿ 1995ರ ಮೇರೆಗೆ ಬ್ಯಾಟರಿ ಚಾಲಿತ ಪ್ರೋಗ್ರಾಮ್ ಮಾಡದೆ ಇರುವಂತಹ ಕ್ಯಾಲುಕ್ಯುಲೇಟರ್‌ಗಳನ್ನು ಎಸ್.ಎ.ಎಸ್ ಪರೀಕ್ಷೆಗಳಲ್ಲಿ ಉಪಯೋಗಿಸಲು ಅಭ್ಯರ್ಥಿಗಳಿಗೆ ಅನುಮತಿ ನೀಡಲಾಗಿದೆ.

(ಆ) ಪರೀಕ್ಷಾ ಕೇಂದ್ರಗಳಿಗೆ ಮೊಬೈಲ್ ಪೋನ್‌ಗಳನ್ನು ಉಪಯೋಗಿಸುವುದನ್ನು ಕಡ್ಡಾಯವಾಗಿ ನಿಷೇದಿಸಲಾಗಿದೆ.

**16. ತೇರ್ಗಡೆ ಪ್ರಮಾಣ ಪತ್ರಗಳು:**

ಪ್ರತಿಯೊಂದು ವಿಷಯಕ್ಕೆ ತೇರ್ಗಡೆ ಪ್ರಮಾಣಪತ್ರವನ್ನು ಆಯೋಗದಿಂದ ಫಲಿತಾಂಶವು ಅಧಿಕೃತವಾಗಿ ರಾಜ್ಯಪತ್ರದಲ್ಲಿ ಪ್ರಕಟವಾದ ನಂತರ ಅಂಚೆಯ ಪ್ರಮಾಣಪತ್ರ (Certificate of Posting) ದ ಮೂಲಕ ಕಳುಹಿಸಲಾಗುವುದು. ಪ್ರಮಾಣ ಪತ್ರದಲ್ಲಿ ಮುದ್ರಿತವಾದ ಹೆಸರು ಅಥವಾ ಇನ್ನಾವುದೇ ರೀತಿಯ ತಪ್ಪುಗಳು ಕಂಡುಬಂದಲ್ಲಿ ಅಭ್ಯರ್ಥಿಗಳು ಕೂಡಲೇ ತಿದ್ದುಪಡಿಗಾಗಿ ಸೂಕ್ತ ದಾಖಲೆಗಳೊಂದಿಗೆ ಆಯೋಗದ ಕಛೇರಿಯನ್ನು ಸಂಪರ್ಕಿಸುವುದು.

(ಸೂಚನೆ: ಪರೀಕ್ಷೆಯ ಪ್ರತಿಭಾಗವನ್ನು ಈ ಉದ್ದೇಶಕ್ಕೆ ಒಂದು ಪ್ರತ್ಯೇಕ ಪರೀಕ್ಷೆ ಎಂದು ಪರಿಗಣಿಸಲಾಗುವುದು)

**ಅಂಕಪಟ್ಟಿಗಳು:** ಇಲಾಖಾ ಪರೀಕ್ಷೆಯ ಎಲ್ಲಾ ಅಭ್ಯರ್ಥಿಗಳ ಅಂಕಗಳನ್ನು ಆಯೋಗದ ವೆಬ್ ಸೈಟ್ **http://kpsc.kar.nic.in** ನಲ್ಲಿ ಫಲಿತಾಂಶ ಪ್ರಕಟವಾದ ದಿನಾಂಕದಂದೇ ಪ್ರಕಟಿಸಲಾಗುವುದು ಪ್ರತ್ಯೇಕವಾಗಿ ಅಂಕಪಟ್ಟಿಗಳನ್ನು ನೀಡಲಾಗುವುದಿಲ್ಲ.

**17. ಅಂಕಗಳ ಮರು ಎಣಿಕೆ:**

ಎ) ಯಾವುದೇ ಪರೀಕ್ಷೆಯಲ್ಲಿ ಅನುತ್ತೀರ್ಣನಾದ ಅಭ್ಯರ್ಥಿಯು ಫಲಿತಾಂಶ ಪ್ರಕಟವಾದ ದಿನಾಂಕದಿಂದ 30 ದಿನಗಳೊಳಗಾಗಿ ಸದರಿ ಪರೀಕ್ಷೆಯ ಎಲ್ಲಾ ಪತ್ರಿಕೆಗಳ ಅಥವಾ ಯಾವುದೇ ಪತ್ರಿಕೆಯ ಅಂಕಗಳ ಮರು ಎಣಿಕೆಗಾಗಿ ಆಯೋಗಕ್ಕೆ ಅರ್ಜಿ ಸಲ್ಲಿಸಬಹುದು, ಅಂತಹ ಅರ್ಜಿ ಸಲ್ಲಿಸುವ ಪ್ರತಿಯೊಬ್ಬ ಅಭ್ಯರ್ಥಿಯು ಕೇವಣಿಯಾಗಿ ಪ್ರತಿ ಪತ್ರಿಕೆಗೆ 50–00 ರೂ.ಗಳನ್ನು ಕಾರ್ಯದರ್ಶಿ ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರಿಗೆ ಸಂದಾಯವಾಗುವಂತೆ ಪಡೆದ ಡಿಡಿ ಮೂಲಕ ಸಂದಾಯ ಮಾಡತಕ್ಕದ್ದು ಮತ್ತು ಅಂತಹ ಮೊತ್ತವನ್ನು ಸಂದಾಯ ಮಾಡಿದ ಪುರಾವೆಯನ್ನು ತನ್ನ ಹೆಸರು, ನೋಂದಣಿ ಸಂಖ್ಯೆ ಮತ್ತು ಮರು ಎಣಿಕೆ ಮಾಡಬೇಕಾದ ವಿಷಯದ ವಿವರಗಳನ್ನು ಅರ್ಜಿಯೊಂದಿಗೆ ಒದಗಿಸತಕ್ಕದ್ದು.

ಬಿ) ಅಭ್ಯರ್ಥಿಯು ಪಡೆದ ಅಂಕಗಳ ಮರು ಎಣಿಕೆಯ ಸಂಬಂಧದಲ್ಲಿ ಆಯೋಗದ ನಿರ್ಣಯವೇ ಅಂತಿಮವಾಗಿರುತ್ತದೆ.

**18. ದುರ್ವರ್ತನೆ:**

ಯಾವುದೇ ಒಬ್ಬ ಅಭ್ಯರ್ಥಿಯು ಸೇವಾ ಪರೀಕ್ಷೆಗಳಿಗೆ ಸಂಬಂಧಪಟ್ಟಂತೆ ಕೃತ್ರಿಮ ದಸ್ತಾವೇಜನ್ನು ಅಥವಾ ಅಕ್ರಮವಾಗಿ ತಿದ್ದಿದ ದಸ್ತಾವೇಜುಗಳನ್ನು ಸಲ್ಲಿಸಿದ ಅಥವಾ ಸರಿಯಲ್ಲದ ಅಥವಾ ಸುಳ್ಳು ವಿವರಣೆಯನ್ನು ನೀಡಿದ ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿದ ಅಥವಾ ಪರೀಕ್ಷೆಯಲ್ಲಿ ಅಕ್ರಮ ವಿಧಾನವನ್ನು ಅನುಸರಿಸಲು ಪ್ರಯತ್ನಿಸಿದ ಅಥವಾ ಬೇರೆ ರೀತಿಯಲ್ಲಿ ಇತರೆ ಯಾವುದೇ ಅಕ್ರಮ ಅನುಚಿತ ಮಾರ್ಗವನ್ನನುಸರಿಸಿದ ಅಪರಾಧವನ್ನು ಮಾಡಿರುವುದಾಗಿ ಆಯೋಗಕ್ಕೆ ಕಂಡುಬಂದಲ್ಲಿ, ಅಂತಹ ಅಭ್ಯರ್ಥಿಯನ್ನು ಕ್ರಿಮಿನಲ್ ವ್ಯವಹರಣೆಗೆ ಗುರಿಪಡಿಸುವುದಲ್ಲದೆ (ಎ) ಅಭ್ಯರ್ಥಿಯ ಆಯ್ಕೆಗಾಗಿ ಆಯೋಗದಿಂದ ನಡೆಸಲಾಗುವ ಯಾವುದೇ ಪರೀಕ್ಷೆಗೆ ಪ್ರವೇಶ ನೀಡುವುದಕ್ಕೆ ಅಥವಾ ಯಾವುದೇ ಸಂದರ್ಶನಕ್ಕೆ ಹಾಜರಾಗುವುದಕ್ಕೆ ಖಾಯಂ ಆಗಿ ಅಥವಾ ಒಂದು ನಿರ್ದಿಷ್ಟ ಅವಧಿಗೆ ಅನರ್ಹಗೊಳಿಸಲಾಗುವುದು ಮತ್ತು (ಬಿ) ಶಿಸ್ತಿನ ಕ್ರಮಕ್ಕೆ ಒಳಪಡಿಸಲಾಗುವುದು.

ಅಭ್ಯರ್ಥಿಗಳು ಪರೀಕ್ಷಾ ಕೇಂದ್ರದಲ್ಲಿ ಸಂವೀಕ್ಷಕರು/ಮೇಲ್ವಿಚಾರಕರು ನೀಡುವ ಸೂಚನೆಗಳನ್ನು ತಪ್ಪದೇ ಪಾಲಿಸುವುದು ತಪ್ಪಿದಲ್ಲಿ ಅದನ್ನು ದುರ್ವರ್ತನೆಯನ್ನಾಗಿ ಪರಿಗಣಿಸಲಾಗುವುದು ಮತ್ತು ಈ ಬಗ್ಗೆ ಶಿಸ್ತಿನ ಕಾರ್ಯವಿಧಾನಗಳಿಗೆ ಒಳಪಡಿಸಲಾಗುವುದು.

**19. ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 69 ಎಸ್‌ಎಸ್‌ಆರ್ 76, ದಿನಾಂಕ 16ನೇ ಜುಲೈ 1977**ರ ಅನುಸಾರವಾಗಿ ನವದೆಹಲಿಯ ಕರ್ನಾಟಕ ಭವನದಲ್ಲಿ ಕೆಲಸ ಮಾಡುತ್ತಿರುವ ಕರ್ನಾಟಕ ರಾಜ್ಯ ಸರ್ಕಾರಿ ನೌಕರರಿಗೆ ಇಲಾಖಾ ಪರೀಕ್ಷೆಗಳನ್ನು ಆಯೋಗದಿಂದ ಉಪನಿವಾಸ ಆಯುಕ್ತರು, ಕರ್ನಾಟಕ ಭವನದ ನಿವಾಸ ಆಯುಕ್ತರ ಕಛೇರಿ, ನವದೆಹಲಿ ಇವರ ನಿಯಂತ್ರಣದಲ್ಲಿ ನಡೆಸಲಾಗುವುದು.

**20. ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 3 ಎಸ್‌ಎಸ್‌ಸಿ 83, ದಿನಾಂಕ 12ನೇ ಅಕ್ಟೋಬರ್ 1983** ಇದರ ಅನುಸಾರವಾಗಿ ಮುಸ್ಸೂರಿಯಲ್ಲಿ ತರಬೇತಿ ಪಡೆಯುತ್ತಿರುವ ಕರ್ನಾಟಕ ರಾಜ್ಯದ ಐ.ಎ.ಎಸ್, ಐ.ಪಿ.ಎಸ್, ಮತ್ತು ಐ.ಎಫ್.ಎಸ್ ಪ್ರೊಬೇಷನರುಗಳಿಗೆ ಇಲಾಖಾ ಪರೀಕ್ಷೆ ಗಳನ್ನು ಆಯೋಗವು ಪರೀಕ್ಷೆಗಳ ನಿಯಂತ್ರಣಾಧಿಕಾರಿ, ಲಾಲ್‌ಬಹದ್ದೂರ್ ಶಾಸ್ತ್ರಿ ರಾಷ್ಟ್ರೀಯ ಪ್ರಶಾಸನ ಅಕಾಡೆಮಿ, ಮುಸ್ಸೂರಿ, ಇವರ ನಿಯಂತ್ರಣದಲ್ಲಿ ನಡೆಸಲಾಗುವುದು.

**21. ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 19 ಎಸ್‌ಎಸ್‌ಸಿ 75, ದಿನಾಂಕ 5ನೇ ಜುಲೈ 1978**ರ ಅನುಸಾರವಾಗಿ ಅಂಧರಾಗಿರುವ ಅಥವಾ ತನ್ನ ಸ್ವಂತ ಕೈಯಿಂದ ಬರೆಯಲು ಅಸಮರ್ಥರಾದ ಅಭ್ಯರ್ಥಿಗಳಿಗೆ ಈ ಮುಂದಿನ ಷರತ್ತುಗಳಿಗೊಳಪಟ್ಟು ಒಬ್ಬ ಅನುಲೇಖಕನ ಸಹಾಯವನ್ನು ಪಡೆಯುವುದಕ್ಕೆ ಅನುಮತಿಸಲಾಗಿದೆ:

1. ಅನುಲೇಖಕನ ಸಹಾಯವನ್ನು ಬಯಸುವ ಅಭ್ಯರ್ಥಿಯು ಅವನು ಅರ್ಜಿಯನ್ನು **ಸರ್ಕಾರಿ ಆಸ್ಪತ್ರೆಯ** ವೈದ್ಯರಿಂದ ನೀಡಲಾದ ಒಂದು ಪ್ರಮಾಣ ಪತ್ರದೊಂದಿಗೆ ಅವನ ಮೇಲಾಧಿಕಾರಿಯ ಮೂಲಕ ಕಳುಹಿಸತಕ್ಕದ್ದು.
2. ಮೇಲಧಿಕಾರಿಯು ಅರ್ಜಿಯನ್ನು ಆಯೋಗಕ್ಕೆ ಕಳುಹಿಸುವ ಮೊದಲು ಅಭ್ಯರ್ಥಿಯು ನಿಜವಾಗಿ ಅಸಮರ್ಥನಾಗಿರುವನೆ ಮತ್ತು ಅವನಿಗೆ ಅನುಲೇಖಕನ ಸಹಾಯ ಅವಶ್ಯವಾಗಿದೆಯೇ ಎಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.
3. ಒಬ್ಬ ಅನುಲೇಖಕನ ಸಹಾಯಕ್ಕೆ ಮಂಜೂರಾತಿ ನೀಡಿದಾಗ ಸಂಬಂಧಪಟ್ಟ ಕೇಂದ್ರದ ಮೇಲ್ವಿಚಾರಕರು ಅಭ್ಯರ್ಥಿಗೆ ಒಬ್ಬ ಅನುಲೇಖಕನನ್ನು ನೇಮಕ ಮಾಡತಕ್ಕದ್ದು ಮತ್ತು ಅದನ್ನು ಕಾರ್ಯದರ್ಶಿ ಮತ್ತು ಇಲಾಖಾ ಪರೀಕ್ಷೆಯ ನಿಯಂತ್ರಣಾಧಿಕಾರಿಗೆ ತಿಳಿಸತಕ್ಕದ್ದು.
4. ಹಾಗೆ ನೇಮಕ ಮಾಡಲಾದ ಅನುಲೇಖಕನು ಅಭ್ಯರ್ಥಿಗಿಂತ ಕೆಳಗಿನ ದರ್ಜೆಯವನು ಅಥವಾ ಕಡಿಮೆ ಶಿಕ್ಷಣ ಪಡೆದವನು ಆಗಿರತಕ್ಕದ್ದು ಮತ್ತು ಅವನು ಅಭ್ಯರ್ಥಿಯ ಸಂಬಂಧಿಕನಾಗಿರಬಾರದು.
5. ಅಭ್ಯರ್ಥಿಗಳು ಪರೀಕ್ಷೆಯ ಪ್ರತಿಯೊಂದು ಪತ್ರಿಕೆಗೆ **ರೂ. 5/–**(ಐದು ರೂಪಾಯಿಗಳು) ಮೊತ್ತವನ್ನು ಮುಂಗಡವಾಗಿ ಸಂದಾಯ ಮಾಡತಕ್ಕದ್ದು ಮತ್ತು ಸದರಿ ಮೊತ್ತವನ್ನು ಪರೀಕ್ಷೆಯ ಪತ್ರಿಕೆ ಮುಗಿದ ಕೂಡಲೇ ಅನುಲೇಖಕನಿಗೆ ಸಂದಾಯ ಮಾಡತಕ್ಕದ್ದು.
6. ಒಬ್ಬ ಅನುಲೇಖಕನನ್ನು ನೇಮಕ ಮಾಡಲಾಗಿದ್ದರೆ ಅಭ್ಯರ್ಥಿಗೆ ಹದಿನೈದು ನಿಮಿಷಗಳ ಹೆಚ್ಚಿನ ಕಾಲಾವಕಾಶವನ್ನು ನೀಡಲಾಗುವುದು.
7. ಅನುಲೇಖಕನ ಸಹಾಯ ಬಯಸುವ ಅಭ್ಯರ್ಥಿಗಳು ಅವಶ್ಯಕ ವೈದ್ಯಕೀಯ ಪ್ರಮಾಣ ಪತ್ರ ಮತ್ತು ಮೇಲಧಿಕಾರಿಗಳ ದೃಢೀಕರಣವನ್ನು ತಮ್ಮ ಅರ್ಜಿಯ ಜೊತೆಯಲ್ಲಿಯೇ ಲಗತ್ತಿಸಿ ಕಳುಹಿಸತಕ್ಕದ್ದು. ಅರ್ಜಿಯೊಂದಿಗೆ ಸಲ್ಲಿಸದಂತಹ ಕೋರಿಕೆಯನ್ನು ಅನಿವಾರ್ಯ ಹಾಗೂ ಸಕಾರಣವಿಲ್ಲದ ಹೊರತು ಇತರ ಯಾವುದೇ ಸಂದರ್ಭಗಳಲ್ಲೂ ನಿಗದಿಪಡಿಸಲಾದ ಕಡೆಯ ದಿನಾಂಕದ ನಂತರ ಪರಿಗಣಿಸಲಾಗುವುದಿಲ್ಲ.
8. ಅಭ್ಯರ್ಥಿಗಳು ಅನುಲೇಖಕನ ಸಹಾಯ ಕೋರಿ ಸಲ್ಲಿಸುವ ವೈದ್ಯಕೀಯ ಪ್ರಮಾಣ ಪತ್ರವನ್ನು ಅನುಮಾನಸ್ಪದ ಸಂದರ್ಭದಲ್ಲಿ ಮಾತ್ರ ವೈದ್ಯಕೀಯ ಮಂಡಳಿಗೆ ಪರಿಶೀಲನೆಗಾಗಿ ಕಳುಹಿಸಲಾಗುವುದು. ಹಾಗೂ ಕೆಲವೊಂದು ಸಂದರ್ಭಗಳಲ್ಲಿ ಅವಶ್ಯಕವೆನಿಸಿದರೆ ಅಂತಹವರನ್ನು ವೈದ್ಯಕೀಯ ಪರಿಶೀಲನೆಗೂ ಗುರಿಪಡಿಸಲಾಗುವುದು. ಸುಳ್ಳು ಪ್ರಮಾಣ ಪತ್ರ ಹಾಜರುಪಡಿಸಿದ್ದು ಅದು ಸಾಬೀತಾದ ಸಂದರ್ಭಗಳಲ್ಲಿ ಅಂತಹ ಅಭ್ಯರ್ಥಿಗಳ ಮೇಲೆ ನಿಯಮಾನುಸಾರ ಶಿಸ್ತಿನ ಕ್ರಮ ಜರುಗಿಸಲಾಗುವುದಲ್ಲದೆ ಅಂತಹವರ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

**22. ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 24 ಎಸ್‌ಎಸ್‌ಆರ್ 2006, ದಿನಾಂಕ:15–11–2006** ರಲ್ಲಿ **"ಸೆಕ್ರೆಟೇರಿಯಟ್ ಮ್ಯಾನ್ಯುಯಲ್ ಭಾಗ–I** ಮತ್ತು ಭಾಗ– **II"** ರ ವಿಷಯದ ಪಠ್ಯ ಕ್ರಮಕ್ಕೆ ಮಾಡಲಾದ ತಿದ್ದುಪಡಿ ಈ ಕೆಳಕಂಡಂತಿದೆ:–

**PAPER – 1**

**MARKS: 100**
**TIME: 2 HOURS**

(1) In the heading `` Secretariat Manual Examination Part-I``, at serial number 32,

(a) for the entries under the sub-heading ``Paper-1``, the following shall be substituted namely:-

"Karnataka Government Secretariat Manual of Office Procedure (Revised) 2005 and connected orders."

**PAPER –II**

**MARKS: 100**
**TIME: 2 HOURS**

(b) in the entries under the sub-heading "Paper-II", for item 4 and 5 and entries relating thereto, the following shall be substituted, namely:-

"(4) Karnataka Civil Services (General Recruitment) Rules, 1977;)

(5) Karnataka Public Service Commission (Consultation) Regulations, 2000"

**SECRETARIAT MANUAL PART-II**

**MARKS: 100**
**TIME: 2 HOURS**

(2) under the heading "Secretariat Manual Examination Part-II", for item (ii) and the entries relating thereto, the following items shall be substituted, namely:-
"(ii) The Karnataka Government (Transaction of Business) Rules, 1977
(iii) The Karnataka Government (Allocation of Business) Rules, 1977"

**23. ಸರ್ಕಾರಿ ಅಧಿಸೂಚನೆ ಸಂಖ್ಯೆ:ಡಿಪಿಎಆರ್ 35 ಎಸ್‌ಎಸ್‌ಆರ್ 2004 ದಿನಾಂಕ:28–08–2006** ರ ಆದೇಶದಲ್ಲಿ "ಎಲೆಕ್ಟ್ರಿಸಿಟಿ (ಆಡಿಟ್ ಆಂಡ್ ಅಕೌಂಟ್ಸ್) ಲಾಸ್ (ಹೈಯರ್) ಎಕ್ಸಾಮಿನೇಷನ್ ಭಾಗ**– I"** ರಲ್ಲಿ ಕೆಳಕಂಡ ಪಠ್ಯ ಕ್ರಮವನ್ನು ಬದಲಾಯಿಸಿದೆ.

**ELECTRICITY (AUDIT AND ACCOUNTS) LAWS (HIGHER) EXAMINATION PART-I**

**MARKS: 100**
**TIME: 2 HOURS**

(1) In the sub-heading "Electricity Laws Examination Paper-1",at Sl.No.50,-
(a) for item (1) and the entries relating thereto, the following shall be substituted, namely:-
(b) for item (3)and the entries relating thereto, the following shall be substituted, namely:-
"(3) The Karnataka Electricity Reforms Act, 1999 and the rules framed thereunder",

(2) In the entries under the sub-heading "Electricity (Audit and Accounts) Laws (Higher) Examination, Part I" at Sl.No. 51,for item (1) and the entries relating thereto, the following shall be substituted, namely:-
"(1) The Electricity Act, 2003 (Central Act 36 of 2003) and the rules made thereunder".

ಪ್ರಶ್ನೆ ಪತ್ರಿಕೆಯು 2 ಗಂಟೆಗಳ ಅವಧಿಯಾಗಿದ್ದು 100 ಅಂಕಗಳನ್ನು ಒಳಗೊಂಡಿರುತ್ತದೆ.

24. ಐಎಎಸ್, ಐಪಿಎಸ್ ಮತ್ತು ಐಎಫ್‌ಎಸ್ ಪ್ರೊಬೇಷನರ್ಸ್‌ಗಳಿಗೆ/ಅಧಿಕಾರಿಗಳಿಗೆ ಕನ್ನಡಭಾಷಾ ವಿಷಯದ ಇಲಾಖಾ ಪರೀಕ್ಷೆ ಅಭ್ಯರ್ಥಿಗಳಿಗೆ ಸರ್ಕಾರವು ತನ್ನ ಆದೇಶ ಸಂಖ್ಯೆ:ಡಿಪಿಎಆರ್ 168 ಎಸ್‌ಎಂಇ 94, ದಿನಾಂಕ: 12–07–1995ರಲ್ಲಿ ನಿಗದಿಪಡಿಸಲಾಗಿದ್ದ ಕನ್ನಡ ಪತ್ರಿಕೆ–1ರಲ್ಲಿ 10ನೇ ತರಗತಿಯ ಪಠ್ಯಪುಸ್ತಕ **"ಸಾಹಿತ್ಯ ಮಂಜರಿ–3"** ಪುಸ್ತಕದ ಬದಲಾಗಿ 10ನೇ ತರಗತಿಯ ಕನ್ನಡ ದ್ವಿತೀಯ ಹಾಗೂ ತೃತೀಯ ಭಾಷಾಪುಸ್ತಕ **"ತಿಳಿಗನ್ನಡ–6"** ಎಂಬ ಪುಸ್ತಕವನ್ನು ನಿಗದಿಪಡಿಸಲಾಗಿದೆ.

25. ಮೇಲಿನ ಅಧಿಸೂಚನೆಗೆ ಅನುಗುಣವಾಗಿಲ್ಲದ, ಹಾಗೂ ಆನ್‌ಲೈನ್ ಅರ್ಜಿಯಲ್ಲಿ ನಿಗದಿತ ಸ್ಥಳದಲ್ಲಿ ಅಭ್ಯರ್ಥಿಯ ಸಹಿ ಇಲ್ಲದಂತಹ, ಸಂಬಂಧಿತ ಮೇಲಾಧಿಕಾರಿಗಳಿಂದ ಅಭ್ಯರ್ಥಿಯ ಭಾವಚಿತ್ರಗಳನ್ನು ದೃಢೀಕರಿಸದಂತಹ ಹಾಗೂ ಮೇಲಧಿಕಾರಿಯ ಸಹಿ ಹಾಗೂ ಮೊಹರುಗಳನ್ನೊಳಗೊಂಡಿಲ್ಲದಂತಹ ಅರ್ಜಿಗಳನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸಲಾಗುವುದು.

26. ನಕಲು ಪ್ರಮಾಣಪತ್ರ ಪಡೆಯಬಯಸುವ ಅಭ್ಯರ್ಥಿಗಳು ತಮ್ಮ ಅರ್ಜಿಯೊಂದಿಗೆ ಪ್ರಮಾಣಪತ್ರವು ಲಭ್ಯವಿಲ್ಲದ ಬಗ್ಗೆ ರೂ. 20/–ಗಳ ಛಾಪಾ ಕಾಗದದ ಮೇಲೆ ನೋಟರಿಯವರ ಮುಂದೆ ಪ್ರಮಾಣಮಾಡಿರುವ "ಅಫಿಡೆವಿಟ್" ಹಾಗೂ ಪ್ರವೇಶಪತ್ರ ನೆರಳಚ್ಚು (ಜೆರಾಕ್ಸ್) ಪ್ರತಿಯನ್ನು ಅಥವಾ ನೋಂದಣಿ ಸಂಖ್ಯೆ. ಅಧಿವೇಶನ. ಪರೀಕ್ಷಾಕೇಂದ್ರ, ಇತ್ಯಾದಿ ವಿವರಗಳನ್ನೊಳಗೊಂಡ ಸೇವಾ ಪುಸ್ತಕದ ಭಾಗ–1ರ ಉದ್ಧೃತಭಾಗವನ್ನು ದೃಢೀಕರಿಸಿ ಲಗತ್ತಿಸಬೇಕು ಹಾಗೂ ಯಾವುದೆ ಅವಧಿಯ ಇಲಾಖೆ ಪರೀಕ್ಷೆಯ ಪ್ರತಿಯೊಂದು ವಿಷಯದ ಪ್ರತ್ಯೇಕ ಪ್ರಮಾಣಪತ್ರಕ್ಕೆ ರೂ. 50/–ಗಳ ಶುಲ್ಕವನ್ನು ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರಿಗೆ ಸಂದಾಯವಾಗುವಂತೆ ಪಡೆದ **ಬ್ಯಾಂಕ್ ಡಿ.ಡಿ**/ಐ.ಪಿ.ಓ.ಅನ್ನು ಸಲ್ಲಿಸತಕ್ಕದ್ದು.

**ಹೆಚ್ಚಿನ ಮಾಹಿತಿಗಾಗಿ ದೂರವಾಣಿ ಸಂಖ್ಯೆಗಳು:**

| ಶಾಖೆಗಳು | ದೂರವಾಣಿ ಸಂಖ್ಯೆಗಳು |
|---|---|
| ಮಾಹಿತಿ ಕೇಂದ್ರ | 080–30574957 |
| ಇಲಾಖಾ ಪರೀಕ್ಷಾ ಶಾಖೆ–1 | 080–30574944 |
| ಇಲಾಖಾ ಪರೀಕ್ಷಾ ಶಾಖೆ–2 | 080–30574945 |
| ಪ್ರಾಂತೀಯ ಕಛೇರಿ ಮೈಸೂರು | 0821–2445956 |
| ಪ್ರಾಂತೀಯ ಕಛೇರಿ ಬೆಳಗಾವಿ | 0831–2475345 |
| ಪ್ರಾಂತೀಯ ಕಛೇರಿ ಗುಲ್ಬರ್ಗಾ | 08472–227944 |
| ಪ್ರಾಂತೀಯ ಕಛೇರಿ ಶಿವಮೊಗ್ಗ | 08182–228099 |
| ಸಹಾಯವಾಣಿ | 9740977411 |

**ಅಭ್ಯರ್ಥಿಗಳಿಗೆ ವಿಶೇಷ ಸೂಚನೆಗಳು:–**

1. ಸೇವಾ ಪರೀಕ್ಷೆಗಳಿಗೆ ಸಂಬಂಧಪಟ್ಟ ಎಲ್ಲಾ ಪತ್ರ ವ್ಯವಹಾರವನ್ನು ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–560001 ಈ ವಿಳಾಸಕ್ಕೆ ಮಾಡತಕ್ಕದ್ದು.
2. ಪರೀಕ್ಷೆಗಳ ಸಂಬಂಧದಲ್ಲಿ ಯಾವುದೇ ಮಾಹಿತಿ ಕೋರುವ ಅಭ್ಯರ್ಥಿಗಳು ಮನವಿಯಲ್ಲಿ ಎಲ್ಲಾ ಮಾಹಿತಿ ನೀಡಿ ಅದರೊಂದಿಗೆ ಸಾಕಷ್ಟು ಅಂಚೆ ಚೀಟಿಗಳನ್ನು ಹಚ್ಚಿದ ಸ್ವವಿಳಾಸ ಬರೆದ ಒಂದು ಲಕೋಟೆಯನ್ನು ಲಗತ್ತಿಸಿದರೆ ಆಯೋಗದ ಉತ್ತರವು ಅಡಚಣೆ ಆಗದೇ ಬೇಗ ತಲುಪುವುದು.
3. ಮಾಹಿತಿಗಾಗಿ ಅಭ್ಯರ್ಥಿಗಳು ಆಯೋಗಕ್ಕೆ ಸಲ್ಲಿಸುವ ಮನವಿಗಳಲ್ಲಿ ನೋಂದಣಿ ಸಂಖ್ಯೆ, ಅಧಿವೇಶನ, ವಿಷಯ ಮತ್ತು ಪರೀಕ್ಷಾಕೇಂದ್ರ ಮುಂತಾದ ಸ್ಪಷ್ಟ ವಿವರಗಳನ್ನು ಸೂಚಿಸದಿದ್ದಲ್ಲಿ ಅಂತಹವುಗಳನ್ನು ಪುರಸ್ಕರಿಸಲಾಗುವುದಿಲ್ಲ.
4. ಅಭ್ಯರ್ಥಿಗಳು ಪೊಲೀಸ್ ಸಮವಸ್ತ್ರವನ್ನು ಧರಿಸಿ ಪರೀಕ್ಷೆ ಬರೆಯುವುದನ್ನು ನಿಷೇಧಿಸಲಾಗಿದೆ.
5. ಅಭ್ಯರ್ಥಿಗಳು ತಮ್ಮ ಸಹ ನೌಕರರನ್ನು/ಇತರರನ್ನು ಕರೆತರುವುದನ್ನು ಮತ್ತು ಪರೀಕ್ಷೆ ನಡೆಯುತ್ತಿರುವಾಗ ಅವರನ್ನು ಭೇಟಿ ಮಾಡಲು ಕೋರುವುದನ್ನು ನಿಷೇಧಿಸಲಾಗಿದೆ.
6. ಅಭ್ಯರ್ಥಿಗಳು ಪರೀಕ್ಷಾ ಕೊಠಡಿಯೊಳಗೆ ಮೊಬೈಲ್ ಫೋನ್ ತರುವುದನ್ನು ನಿಷೇಧಿಸಲಾಗಿದೆ.

**ವಿ.ಬಿ. ಪಾಟೀಲ್**
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಇಲಾಖಾ ಪರೀಕ್ಷೆಗಳು, ಕರ್ನಾಟಕ ಲೋಕಸೇವಾ ಆಯೋಗ.

**ಕರ್ನಾಟಕ ಲೋಕಸೇವಾ ಆಯೋಗ,"ಉದ್ಯೋಗ ಸೌಧ", ಬೆಂಗಳೂರು–560001.**

**ಅಧಿಸೂಚನೆ ಸಂಖ್ಯೆ ಇ.ಪ.(1)3692/2009–2010/ಪಿಎಸ್‌ಸಿ ದಿನಾಂಕ:23–03–2010ಕ್ಕೆ**

**ಅನುಬಂಧ "ಎ"**

**2010ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳು**

**ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ನಡೆಯಲಿರುವ ಪರೀಕ್ಷೆಗಳ ವೇಳಾಪಟ್ಟಿ**

| ಕ್ರ. ಸಂ. | ವಾರ | ದಿನಾಂಕ | ವೇಳೆ | ವಿಷಯ |
|---|---|---|---|---|
| 1. | ಶುಕ್ರವಾರ | 11–06–2010 | ಬೆಳಿಗ್ಗೆ 10.00 ರಿಂದ 12–00 ಗಂಟೆ<br>ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಅಕೌಂಟ್ಸ್ ಲೋಯರ್<br>ಜನರಲ್ ಲಾ ಭಾಗ–II |
| 2 | ಶನಿವಾರ | 12–06–2010 | ಬೆಳಿಗ್ಗೆ 10.00 ರಿಂದ 12.00 ಗಂಟೆ<br>ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಜನರಲ್ ಲಾ ಭಾಗ– I ಪತ್ರಿಕೆ– 1<br>ಜನರಲ್ ಲಾ ಭಾಗ– I ಪತ್ರಿಕೆ– 2 |
| 3. | ಭಾನುವಾರ | 13–06–2010 | ಬೆಳಿಗ್ಗೆ 10.00 ರಿಂದ 12.00 ಗಂಟೆ<br>ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಅಕೌಂಟ್ಸ್ ಹೈಯರ್ ಪತ್ರಿಕೆ–1<br>ಅಕೌಂಟ್ಸ್ ಹೈಯರ್ ಪತ್ರಿಕೆ–2 |
| 4. | ಸೋಮವಾರ | 14–06–2010 | ಬೆಳಿಗ್ಗೆ 10.00 ರಿಂದ 12.00 ಗಂಟೆ<br>ಮಧ್ಯಾಹ್ನ 2.00 ರಿಂದ ಸಂಜೆ 3.00 ಗಂಟೆ | ಕನ್ನಡ ಪತ್ರಿಕೆ–1 (ಪುಸ್ತಕಗಳಿಲ್ಲದೆ)<br>ಕನ್ನಡ ಪತ್ರಿಕೆ–2 (ಪುಸ್ತಕಗಳಿಲ್ಲದೆ) |
| 5. | ಮಂಗಳವಾರ | 15–06–2010 | ಬೆಳಿಗ್ಗೆ 10.00 ರಿಂದ 1.00 ಗಂಟೆ<br>ಮೇಲಿನಂತೆ<br>ಮಧ್ಯಾಹ್ನ 2.00 ರಿಂದ ಸಂಜೆ 5.00 ಗಂಟೆ<br>ಮೇಲಿನಂತೆ | ಇನ್ಸೂರೆನ್ಸ್ ಹೈಯರ್ ಪತ್ರಿಕೆ–2 (ಪುಸ್ತಕಗಳಿಲ್ಲದೆ)<br>ಪಿ.ಡಬ್ಲ್ಯೂಡಿ ಹೈಯರ್ ಭಾಗ– I ಪತ್ರಿಕೆ–1, (ಪುಸ್ತಕಗಳಿಲ್ಲದೆ)<br>ಇನ್ಸೂರೆನ್ಸ್ ಲೋಯರ್ ಪತ್ರಿಕೆ–2 {ಪುಸ್ತಕಗಳಿಲ್ಲದೆ}<br>ಪ್ರೆಸ್ ಮ್ಯಾನ್ಯುಯಲ್ ಹೈಯರ್ ಪತ್ರಿಕೆ–2, |
| 6 | ಬುಧವಾರ | 16–06–2010 | ಬೆಳಿಗ್ಗೆ 10.00 ರಿಂದ 12.00 ಗಂಟೆ<br>ಮೇಲಿನಂತೆ<br>ಮೇಲಿನಂತೆ<br>ಮೇಲಿನಂತೆ<br>ಮೇಲಿನಂತೆ<br>ಮೇಲಿನಂತೆ<br>ಮಧ್ಯಾಹ್ನ 2.00 ರಿಂದ ಸಂಜೆ 4.00ಗಂಟೆ<br>ಮೇಲಿನಂತೆ<br>ಮೇಲಿನಂತೆ | ಲೇಬರ್ ಪತ್ರಿಕೆ–1<br>ಪ್ರಿಸನ್ಸ್<br>ಎಕ್ಸೈಸ್<br>ಮೋಟಾರ್ ವೆಹಿಕಲ್ಸ್<br>ರೆವಿನ್ಯೂ ಹೈಯರ್ ಭಾಗ– I ಪತ್ರಿಕೆ–1<br>ಇನ್ಸೂರೆನ್ಸ್ ಅಡ್ವಾನ್ಸಡ್ ಪತ್ರಿಕೆ–1<br>ಲೇಬರ್ ಪತ್ರಿಕೆ–2<br>ಇನ್ಸೂರೆನ್ಸ್ ಅಡ್ವಾನ್ಸಡ್ ಪತ್ರಿಕೆ–2<br>ರೆವಿನ್ಯೂ ಹೈಯರ್ ಭಾಗ– I ಪತ್ರಿಕೆ–2 |

| ಕ್ರ. ಸಂ. | ವಾರ | ದಿನಾಂಕ | ವೇಳೆ | ವಿಷಯ |
|---|---|---|---|---|
| 7. | ಗುರುವಾರ | 17–06–2010 | ಬೆಳಿಗ್ಗೆ 10.00 ರಿಂದ 12.00 ಗಂಟೆ | ರೆವಿನ್ಯೂ ಹೈಯರ್ ಭಾಗ– II ಪತ್ರಿಕೆ–1 |
| | | | ಮೇಲಿನಂತೆ | ರಿಜಿಸ್ಟ್ರೇಷನ್ ಪತ್ರಿಕೆ–1 |
| | | | ಮೇಲಿನಂತೆ | ಕಮರ್ಷಿಯಲ್‌ಟ್ಯಾಕ್ಸ್ ಭಾಗ– I ಪತ್ರಿಕೆ–1 |
| | | | ಮೇಲಿನಂತೆ | ಇನ್ಸೂರೆನ್ಸ್ ಅಡ್ವಾನ್ಸಡ್ ಪತ್ರಿಕೆ–3 |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ರೆವಿನ್ಯೂ ಹೈಯರ್ ಭಾಗ– II ಪತ್ರಿಕೆ–2 |
| | | | ಮೇಲಿನಂತೆ | ರಿಜಿಸ್ಟ್ರೇಷನ್ ಪತ್ರಿಕೆ–2 |
| | | | ಮೇಲಿನಂತೆ | ಕಮರ್ಷಿಯಲ್‌ಟ್ಯಾಕ್ಸ್ ಭಾಗ– I, ಪತ್ರಿಕೆ–2 |
| | | | ಮೇಲಿನಂತೆ | ಇನ್ಸೂರೆನ್ಸ್ ಹೈಯರ್ ಪತ್ರಿಕೆ–1 |
| 8. | ಶುಕ್ರವಾರ | 18–06–2010 | ಬೆಳಿಗ್ಗೆ 10.00 ರಿಂದ 12.00 ಗಂಟೆ | ಪೊಲೀಸ್ ಮ್ಯಾನ್ಯುಯಲ್ |
| | | | ಮೇಲಿನಂತೆ | ಕೋ–ಆಪರೇಷನ್ ಪತ್ರಿಕೆ–1 |
| | | | ಮೇಲಿನಂತೆ | ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಹೈಯರ್ |
| | | | ಮೇಲಿನಂತೆ | ಮಾರ್ಕೆಟಿಂಗ್ ಪತ್ರಿಕೆ–1 |
| | | | ಮೇಲಿನಂತೆ | ಮೈನಿಂಗ್ ಭಾಗ– I |
| | | | ಮೇಲಿನಂತೆ | ರೆವಿನ್ಯೂ ಲೋಯರ್ ಪತ್ರಿಕೆ–1 |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಕಮರ್ಷಿಯಲ್ ಟ್ಯಾಕ್ಸ್ ಭಾಗ– I ಪತ್ರಿಕೆ–3 ಮತ್ತು ಕೋ–ಆಪರೇಷನ್ ಪತ್ರಿಕೆ–2 (ಎರಡಕ್ಕೂ ಒಂದೇ ಪ್ರಶ್ನೆ ಪತ್ರಿಕೆ) |
| | | | ಮೇಲಿನಂತೆ | ಇನ್ಸೂರೆನ್ಸ್ ಹೈಯರ್ ಪತ್ರಿಕೆ–3 |
| | | | ಮೇಲಿನಂತೆ | ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಲೋಯರ್ |
| | | | ಮೇಲಿನಂತೆ | ಮಾರ್ಕೆಟಿಂಗ್ ಪತ್ರಿಕೆ–2 |
| | | | ಮೇಲಿನಂತೆ | ಮೈನಿಂಗ್ ಭಾಗ– II |
| | | | ಮೇಲಿನಂತೆ | ರೆವಿನ್ಯೂ ಲೋಯರ್ ಪತ್ರಿಕೆ–2 |
| 9. | ಶನಿವಾರ | 19–06–2010 | ಬೆಳಿಗ್ಗೆ 10.00 ರಿಂದ 12.00 ಗಂಟೆ | ಸಿರಿಕಲ್ಚರ್ ಪತ್ರಿಕೆ–1 |
| | | | ಮೇಲಿನಂತೆ | ಕಮ್ಯೂನಿಟಿ ಡೆವಲಪ್‌ಮೆಂಟ್ ಭಾಗ– I |
| | | | ಮೇಲಿನಂತೆ | ರೆವಿನ್ಯೂ ಲೋಯರ್ ಪತ್ರಿಕೆ–3 |
| | | | ಮೇಲಿನಂತೆ | ಕಮರ್ಷಿಯಲ್ ಟ್ಯಾಕ್ಸ್ ಭಾಗ– II ಪತ್ರಿಕೆ–1 |
| | | | ಮೇಲಿನಂತೆ | ಪ್ರೆಸ್ ಮ್ಯಾನ್ಯುಯಲ್ ಹೈಯರ್ ಪತ್ರಿಕೆ–1 |
| | | | ಮೇಲಿನಂತೆ | ಲೋಕಲ್ ಲಾಸ್ ಅಂಡ್ ಕಮರ್ಷಿಯಲ್ ಬುಕ್ ಕೀಪಿಂಗ್ ಪತ್ರಿಕೆ–1 |
| | | | ಮೇಲಿನಂತೆ | ಪೋರ್ಟ್ಸ್ ಹೈಯರ್ |
| | | | ಮೇಲಿನಂತೆ | ಇನ್ಸೂರೆನ್ಸ್ ಲೋಯರ್ ಪತ್ರಿಕೆ–1 |
| | | | ಮೇಲಿನಂತೆ | ಯೂಥ್ ಸರ್ವೀಸಸ್ ಮ್ಯಾನ್ಯುಯಲ್ |
| | | | ಮಧ್ಯಾಹ್ನ 2.00ರ ರಿಂದ ಸಂಜೆ 4.00 ಗಂಟೆ | ಸಿರಿಕಲ್ಚರ್ ಪತ್ರಿಕೆ–2 |
| | | | ಮೇಲಿನಂತೆ | ಪಿ.ಡಬ್ಲ್ಯೂ.ಡಿ ಹೈಯರ್ ಭಾಗ– I, ಪತ್ರಿಕೆ–2 |
| | | | ಮೇಲಿನಂತೆ | ಲೋಕಲ್ ಲಾಸ್ ಅಂಡ್ ಕಮರ್ಷಿಯಲ್ ಬುಕ್ ಕೀಪಿಂಗ್ ಪತ್ರಿಕೆ–2 |
| | | | ಮೇಲಿನಂತೆ | ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ– II |
| | | | ಮೇಲಿನಂತೆ | ಕಮರ್ಷಿಯಲ್ ಟ್ಯಾಕ್ಸ್ ಭಾಗ– II ಪತ್ರಿಕೆ–2 |
| | | | ಮೇಲಿನಂತೆ | ಪೋರ್ಟ್ಸ್ ಲೋಯರ್ |
| 10 | ಭಾನುವಾರ | 20–06–2010 | ಬೆಳಿಗ್ಗೆ 10.00 ರಿಂದ 12.00 ಗಂಟೆ | ಫ್ಯಾಕ್ಟರೀಸ್ ಅಂಡ್ ಬಾಯ್ಲರ್ಸ್‌ಲಾಸ್ ಪತ್ರಿಕೆ–1 |
| | | | ಮೇಲಿನಂತೆ | ಇನ್ಸೂರೆನ್ಸ್ ಲೋಯರ್ ಪತ್ರಿಕೆ–3 |
| | | | ಮೇಲಿನಂತೆ | ಪಿ.ಡಬ್ಲ್ಯೂ.ಡಿ ಹೈಯರ್ ಭಾಗ– II ಪತ್ರಿಕೆ–1 |
| | | | ಮೇಲಿನಂತೆ | ಪ್ರೆಸ್ ಮ್ಯಾನ್ಯುಯಲ್ ಲೋಯರ್ ಪತ್ರಿಕೆ–1 |
| | | | ಮೇಲಿನಂತೆ | ಆಕ್ಟ್ಸ್ ಅಂಡ್ ರೂಲ್ಸ್ ರಿಲೇಟಿಂಗ್ ಟು ವಿಮೆನ್ ಅಂಡ್ ಚೈಲ್ಡ್ ಡೆವೆಲಪ್‌ಮೆಂಟ್ |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಫ್ಯಾಕ್ಟರೀಸ್ ಅಂಡ್ ಬಾಯ್ಲರ್ಸ್‌ಲಾಸ್ ಪತ್ರಿಕೆ–2 |
| | | | ಮೇಲಿನಂತೆ | ಪಿ.ಡಬ್ಲ್ಯೂ.ಡಿ ಹೈಯರ್ ಭಾಗ– II, ಪತ್ರಿಕೆ–2 |
| | | | ಮೇಲಿನಂತೆ | ಪ್ರೆಸ್‌ಮ್ಯಾನ್ಯುಯಲ್ ಲೋಯರ್ ಪತ್ರಿಕೆ–2 |
| | | | ಮೇಲಿನಂತೆ | ಕೋ–ಆಪರೇಟಿವ್ ಆಡಿಟ್ ಎಕ್ಸಾಮಿನೇಶನ್ ಪತ್ರಿಕೆ–1 |

| ಕ್ರ. ಸಂ. | ವಾರ | ದಿನಾಂಕ | ವೇಳೆ | ವಿಷಯ |
|---|---|---|---|---|
| 11 | ಸೋಮವಾರ | 21–06–2010 | ಬೆಳಿಗ್ಗೆ 10.00 ರಿಂದ 12.00 ಗಂಟೆ | ಪಿ.ಡಬ್ಲ್ಯೂ.ಡಿ. ಲೋಯರ್ ಪತ್ರಿಕೆ–1 |
| | | | ಮೇಲಿನಂತೆ | ಸೋಶಿಯಲ್ ವೆಲ್‌ಫೇರ್ ಅಂಡ್ ಬ್ಯಾಕ್ ವರ್ಡ್‌ಕ್ಲಾಸಸ್ ಮ್ಯಾನ್ಯುಯಲ್ ಅಂಡ್ ಕ್ಲಾಸಿಫಿಕೇಶನ್ ರಿಜರ್‌ವೇಶನ್ ಫಾರ್ ಬ್ಯಾಕ್‌ವರ್ಡ್ ಕ್ಲಾಸಸ್ ಭಾಗ– I |
| | | | ಮೇಲಿನಂತೆ | ಫಾರೆಸ್ಟ್ ಪತ್ರಿಕೆ–1 |
| | | | ಮೇಲಿನಂತೆ | ಕೋ–ಆಪರೇಟಿವ್ ಆಡಿಟ್ ಎಕ್ಸಾಮಿನೇಶನ್ ಪತ್ರಿಕೆ–2 |
| | | | ಮೇಲಿನಂತೆ | ಫುಡ್ ಅಂಡ್ ಸಿವಿಲ್ ಸಪ್ಲೈಸ್ ಪತ್ರಿಕೆ–1 |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಹೋಂ ಗಾರ್ಡ್ಸ್ ಮ್ಯಾನ್ಯುಯಲ್ |
| | | | ಮೇಲಿನಂತೆ | ಸೋಶಿಯಲ್ ವೆಲ್‌ಫೇರ್ ಅಂಡ್ ಬ್ಯಾಕ್ ವರ್ಡ್‌ಕ್ಲಾಸಸ್ ಮ್ಯಾನ್ಯುಯಲ್ ಅಂಡ್ ಕ್ಲಾಸಿಫಿಕೇಶನ್ ರಿಜರ್‌ವೇಶನ್ ಫಾರ್ ಬ್ಯಾಕ್‌ವರ್ಡ್ ಕ್ಲಾಸಸ್ ಭಾಗ– II |
| | | | ಮೇಲಿನಂತೆ | ಪಿ.ಡಬ್ಲ್ಯೂ.ಡಿ. ಲೋಯರ್ ಪತ್ರಿಕೆ–2 |
| | | | ಮೇಲಿನಂತೆ | ಫಾರೆಸ್ಟ್ ಪತ್ರಿಕೆ–2 |
| | | | ಮೇಲಿನಂತೆ | ಕೋ–ಆಪರೇಟಿವ್ ಆಡಿಟ್ ಎಕ್ಸಾಮಿನೇಶನ್ ಪತ್ರಿಕೆ–3 |
| | | | ಮೇಲಿನಂತೆ | ಫುಡ್ ಅಂಡ್ ಸಿವಿಲ್ ಸಪ್ಲೈಸ್ ಪತ್ರಿಕೆ–2 |
| 12 | ಮಂಗಳವಾರ | 22–06–2010 | ಬೆಳಿಗ್ಗೆ 10.00 ರಿಂದ 12.00 ಗಂಟೆ | ಮುನಿಸಿಪಲ್ ಅಂಡ್ ಲೋಕಲ್ ಬೋರ್ಡ್ಸ್ ಪತ್ರಿಕೆ–1 |
| | | | ಮೇಲಿನಂತೆ | ಕರ್ನಾಟಕ ಕನ್ಸ್ಯೂಮರ್ ಪ್ರೋಟಕ್ಷನ್ಸ್ ಸ್ಟೇಟ್ ಕಮಿಷನ್ ಅಂಡ್ ಡಿಸ್ಟ್ರಿಕ್ ಫೋರಮ್ ಸರ್ವೀಸ್ ಎಕ್ಸಾಮಿನೇಶನ್– ಪತ್ರಿಕೆ–1 |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಮುನಿಸಿಪಲ್ ಅಂಡ್ ಲೋಕಲ್ ಬೋರ್ಡ್ಸ್ ಪತ್ರಿಕೆ–2 |
| | | | ಮೇಲಿನಂತೆ | ಕರ್ನಾಟಕ ಕನ್ಸ್ಯೂಮರ್ ಪ್ರೋಟಕ್ಷನ್ಸ್ ಸ್ಟೇಟ್ ಕಮಿಷನ್ ಅಂಡ್ ಡಿಸ್ಟ್ರಿಕ್ ಫೋರಮ್ ಸರ್ವೀಸ್ ಎಕ್ಸಾಮಿನೇಶನ್– ಪತ್ರಿಕೆ–2 |

**ವಿ.ಬಿ. ಪಾಟೀಲ್**

ಕಾರ್ಯದರ್ಶಿ ಹಾಗೂ ನಿಯಂತ್ರಕರು,

ಇಲಾಖಾ ಪರೀಕ್ಷೆಗಳು, ಕರ್ನಾಟಕ ಲೋಕಸೇವಾ ಆಯೋಗ ಬೆಂಗಳೂರು.

**ಕರ್ನಾಟಕ ಲೋಕಸೇವಾ ಆಯೋಗ,"ಉದ್ಯೋಗ ಸೌಧ", ಬೆಂಗಳೂರು–560001.**

**ಅಧಿಸೂಚನೆ ಸಂಖ್ಯೆ ಇ.ಪ.(1)3692/2009–2010/ಪಿಎಸ್‌ಸಿ ದಿನಾಂಕ: 23–03–2010ಕ್ಕೆ**

**ಅನುಬಂಧ–"ಬಿ"**

**2010ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳು**

**ಬೆಂಗಳೂರು, ಕೇಂದ್ರದಲ್ಲಿ ಮಾತ್ರ ನಡೆಯಲಿರುವ ಪರೀಕ್ಷೆಗಳ ವೇಳಾಪಟ್ಟಿ.**

| ಕ್ರ. ಸಂ. | ವಾರ | ದಿನಾಂಕ | ವೇಳೆ | ವಿಷಯ |
|---|---|---|---|---|
| 1. | ಶುಕ್ರವಾರ | 25–06–2010 | ಬೆಳಿಗ್ಗೆ 10.00 ರಿಂದ ಮಧ್ಯಾಹ್ನ 1.00 ಗಂಟೆ | ಎಸ್.ಎ.ಎಸ್.ಭಾಗ– I, ಪತ್ರಿಕೆ–1 ಮತ್ತು ಎಲೆಕ್ಟ್ರಿಸಿಟಿ ಆಡಿಟ್ ಅಂಡ್ ಅಕೌಂಟ್ಸ್‌ಲಾಸ್ (ಹೈಯರ್) ಭಾಗ– II (ಎರಡಕ್ಕೂ ಒಂದೇ ಪ್ರಶ್ನೆ ಪತ್ರಿಕೆ) (ಪುಸ್ತಕಗಳಿಲ್ಲದೆ) |
| | | | ಮೇಲಿನಂತೆ | ಟ್ರೆಜರಿ ಅಕೌಂಟ್ಸ್ ಭಾಗ– I ಪತ್ರಿಕೆ–1 (ಪುಸ್ತಕಗಳಿಲ್ಲದೆ) |
| | | | ಮೇಲಿನಂತೆ | ಕನ್ನಡ ಪತ್ರಿಕೆ–1 (ಐಎಎಸ್, ಐಪಿಎಸ್ ಮತ್ತು ಐಎಫ್‌ಎಸ್ ಅಧಿಕಾರಿಗಳಿಗೆ ಮಾತ್ರ) (ಪುಸ್ತಕಗಳಿಲ್ಲದೆ) |
| | | | ಬೆಳಿಗ್ಗೆ 10.00 ರಿಂದ ಮಧ್ಯಾಹ್ನ 12.00 ಗಂಟೆ | ಸ್ಪೆಷಲ್ ಲಾಸ್ ಅಂಡ್ ಸರ್ವೀಸ್ ರೂಲ್ಸ್ |
| | | | ಮೇಲಿನಂತೆ | ಕರ್ನಾಟಕ ಅಡ್ಮಿನಿಸ್ಟ್ರೇಟಿವ್ ಟ್ರಿಬ್ಯುನಲ್ ಎಕ್ಸಾಮಿನೇಶನ್ |

| ಕ್ರ. ಸಂ. | ವಾರ | ದಿನಾಂಕ | ವೇಳೆ | ವಿಷಯ |
|---|---|---|---|---|
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಎಸ್.ಎ.ಎಸ್.ಭಾಗ– I ಪತ್ರಿಕೆ–2 (ಪುಸ್ತಕಗಳಿಲ್ಲದೆ) |
| | | | ಮೇಲಿನಂತೆ | ಟ್ರೆಜರಿ ಅಕೌಂಟ್ಸ್ ಭಾಗ– I ಪತ್ರಿಕೆ–2 (ಪುಸ್ತಕಗಳಿಲ್ಲದೆ) |
| | | | ಮಧ್ಯಾಹ್ನ 2.00 ರಿಂದ ಸಂಜೆ 5.00 ಗಂಟೆ | ಸೆಕ್ರೆಟೇರಿಯಟ್ ಮ್ಯಾನುಯಲ್ ಭಾಗ– II |
| | | | ಮೇಲಿನಂತೆ | ಟ್ರಾನ್ಸ್‌ಲೇಶನ್ ಟೆಸ್ಟ್ (ಪುಸ್ತಕಗಳಿಲ್ಲದೆ) |
| | | | ಮೇಲಿನಂತೆ | ಕನ್ನಡ ಪತ್ರಿಕೆ–2 (ಐಎಎಸ್, ಐಪಿಎಸ್ ಮತ್ತು ಐಎಫ್‌ಎಸ್ ಅಧಿಕಾರಿಗಳಿಗೆ ಮಾತ್ರ) (ಪುಸ್ತಕಗಳಿಲ್ಲದೆ) |
| 2. | ಶನಿವಾರ | 26–06–2010 | ಬೆಳಿಗ್ಗೆ 10.00 ರಿಂದ 12.00 ಗಂಟೆ | ಎಸ್.ಎ.ಎಸ್. ಭಾಗ– I ಪತ್ರಿಕೆ–3 |
| | | | ಮೇಲಿನಂತೆ | ಟ್ರೆಜರಿ ಅಕೌಂಟ್ಸ್ ಭಾಗ– I ಪತ್ರಿಕೆ–3 |
| | | | ಮಧ್ಯಾಹ್ನ 2–00 ರಿಂದ ಸಂಜೆ 4–00 ಗಂಟೆ | ಎಸ್.ಎ.ಎಸ್. ಭಾಗ– II ಪತ್ರಿಕೆ–1 (ಪುಸ್ತಕಗಳಿಲ್ಲದೆ) |
| | | | ಮೇಲಿನಂತೆ | ಟ್ರೆಜರಿ ಅಕೌಂಟ್ಸ್ ಭಾಗ– II ಪತ್ರಿಕೆ–1 (ಎಲಿಮೆಂಟರಿ ಬುಕ್ ಕೀಪಿಂಗ್) |
| 3 | ಭಾನುವಾರ | 27–06–2010 | ಬೆಳಿಗ್ಗೆ 10.00 ರಿಂದ 12.00 ಗಂಟೆ | ಎಸ್.ಎ.ಎಸ್. ಭಾಗ– II ಪತ್ರಿಕೆ–2 |
| | | | ಮೇಲಿನಂತೆ | ಎಲೆಕ್ಟ್ರಿಸಿಟಿ ಲಾಸ್ ಪರೀಕ್ಷೆ ಪತ್ರಿಕೆ–1 |
| | | | ಮೇಲಿನಂತೆ | ಟ್ರೆಜರಿ ಅಕೌಂಟ್ಸ್ ಭಾಗ– II ಪತ್ರಿಕೆ–2 (ಪುಸ್ತಕಗಳಿಲ್ಲದೆ) |
| | | | ಮಧ್ಯಾಹ್ನ 2–00 ರಿಂದ ಸಂಜೆ 4–00 ಗಂಟೆ | ಎಲೆಕ್ಟ್ರಿಸಿಟಿ ಲಾಸ್ ಪರೀಕ್ಷೆ ಪತ್ರಿಕೆ–2 |
| | | | ಮೇಲಿನಂತೆ | ಎಸ್.ಎ.ಎಸ್ ಭಾಗ– II ಪತ್ರಿಕೆ–3 |
| | | | ಮೇಲಿನಂತೆ | ಟ್ರೆಜರಿ ಅಕೌಂಟ್ಸ್ ಭಾಗ– II ಪತ್ರಿಕೆ–3 |
| 4. | ಸೋಮವಾರ | 28–06–2010 | ಬೆಳಿಗ್ಗೆ 10.00 ರಿಂದ 12.00 ಗಂಟೆ | ಎಸ್.ಎ.ಎಸ್. ಭಾಗ– III ಪತ್ರಿಕೆ–1 |
| | | | ಮಧ್ಯಾಹ್ನ 2–00 ರಿಂದ ಸಂಜೆ 4–00 ಗಂಟೆ | ಎಸ್.ಎ.ಎಸ್. ಭಾಗ– III ಪತ್ರಿಕೆ–2 (ಪುಸ್ತಕಗಳಿಲ್ಲದೆ) |
| 5. | ಮಂಗಳವಾರ | 29–06–2010 | ಬೆಳಿಗ್ಗೆ 10.00 ರಿಂದ 12.00 ಗಂಟೆ | ಎಸ್.ಎ.ಎಸ್. ಭಾಗ– III ಪತ್ರಿಕೆ–3 |
| | | | ಮಧ್ಯಾಹ್ನ 2–00 ರಿಂದ ಸಂಜೆ 4–00 ಗಂಟೆ | ಎಸ್.ಎ.ಎಸ್. ಭಾಗ– III ಪತ್ರಿಕೆ–4 (ಪುಸ್ತಕಗಳಿಲ್ಲದೆ) |
| | | | ಮೇಲಿನಂತೆ | ಎಲೆಕ್ಟ್ರಿಸಿಟಿ(ಆಡಿಟ್ ಅಂಡ್ ಅಕೌಂಟ್ಸ್) ಲಾಸ್ ಲೋಯರ್ ಪರೀಕ್ಷೆ |
| 6. | ಬುಧವಾರ | 30–06–2010 | ಬೆಳಿಗ್ಗೆ 10.00 ರಿಂದ 12.00 ಗಂಟೆ | ಎಲೆಕ್ಟ್ರಿಸಿಟಿ (ಆಡಿಟ್ ಅಂಡ್ ಅಕೌಂಟ್ಸ್) ಲಾಸ್ ಹೈಯರ್ ಪರೀಕ್ಷೆ ಭಾಗ– I |
| | | | ಮೇಲಿನಂತೆ | ಎಸ್.ಎ.ಎಸ್ ಭಾಗ– III ಪತ್ರಿಕೆ–5 |
| | | | ಮೇಲಿನಂತೆ | ಸೆಕ್ರೆಟೇರಿಯೆಟ್ ಮ್ಯಾನುಯಲ್ ಭಾಗ– I ಪತ್ರಿಕೆ–1 |
| | | | ಮೇಲಿನಂತೆ | ಇಂಡಿಯನ್ ಕಾಂಟ್ರಾಕ್ಟ್ ಆಕ್ಟ್ |
| | | | ಮೇಲಿನಂತೆ | ಕರ್ನಾಟಕ ಲೋಕಸೇವಾ ಆಯೋಗ ಮ್ಯಾನುಯಲ್ |
| | | | ಮಧ್ಯಾಹ್ನ 2–00 ರಿಂದ ಸಂಜೆ 4–00 ಗಂಟೆ | ಸೆಕ್ರೆಟೇರಿಯೆಟ್ ಮ್ಯಾನುಯಲ್ ಭಾಗ– I ಪತ್ರಿಕೆ–2 |
| | | | ಮೇಲಿನಂತೆ | ಕರ್ನಾಟಕ ಲೋಕಸೇವಾ ಆಯೋಗ ರಿಕ್ರೂಟ್‌ಮೆಂಟ್ ರೂಲ್ಸ್ |

**ವಿ.ಬಿ. ಪಾಟೀಲ್**
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಇಲಾಖಾ ಪರೀಕ್ಷೆಗಳು
ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್. 208

**ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ,**
**ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು–2**
**ಅಧಿಸೂಚನೆ**

**ಸಂಖ್ಯೆ: ಕಸನಿ:74:ಸಿಬ್ಬಂದಿ1:2008–09, ದಿನಾಂಕ: 17ನೇ ಮಾರ್ಚ್ 2010**

**ವಿಷಯ:** ಕಾರವಾರ ಜಿಲ್ಲಾ ರಂಗಮಂದಿರದ ಹಿರಿಯ ಎಲೆಕ್ಟ್ರೀಷಿಯನ್ ಕಂ ಸೌಂಡ್ ಸೂಪರ್‌ವೈಜರ್, ಬ್ಯಾಕ್‌ಲಾಗ್ ಹುದ್ದೆಯನ್ನು ತುಂಬುವ ಕುರಿತು.

ಈ ಇಲಾಖೆಯ ಉ.ಕ.ಜಿಲ್ಲೆ, ಕಾರವಾರ ಇಲ್ಲಿ ಖಾಲಿ ಇರುವ ಹಿರಿಯ ಎಲೆಕ್ಟ್ರೀಷಿಯನ್ ಕಂ ಸೌಂಡ್ ಸೂಪರ್ ವೈಜರ್ ಒಂದು ಹುದ್ದೆಯನ್ನು ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್‌ಯಡಿ ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 13 ಎಸ್.ಬಿಸಿ 2001, ದಿನಾಂಕ: 21.11.2001 ಮತ್ತು 01.06.2002 ರ ಅನ್ವಯ ಭರ್ತಿ ಮಾಡಲು ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಅರ್ಹ ಅಭ್ಯರ್ಥಿಗಳಿಂದ ಆಹ್ವಾನಿಸಲಾಗಿದೆ. ಅಭ್ಯರ್ಥಿಗಳು ಈ ಅಧಿಸೂಚನೆಯೊಡನೆ ಪ್ರಕಟಿಸಿರುವ ನಿಗದಿತ ಅರ್ಜಿ ನಮೂನೆಯಲ್ಲಿ ಭರ್ತಿ ಮಾಡಿದ ಅರ್ಜಿಗಳನ್ನು ದಿನಾಂಕ:30.4.2010 ಸಾಯಂಕಾಲ 5 ಗಂಟೆಯೊಳಗೆ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು–2 ಇಲ್ಲಿಗೆ ತಲುಪಿಸತಕ್ಕದ್ದು.

1. ಖಾಲಿ ಹುದ್ದೆಗಳ ಸಂಖ್ಯೆ: 01 (ಒಂದು)
2. ಹಿರಿಯ ಎಲೆಕ್ಟ್ರೀಷಿಯನ್ ಕಂ ಸೌಂಡ್ ಸೂಪರ್‌ವೈಸರ್ ಹುದ್ದೆಯ ಮೀಸಲಾತಿ ವರ್ಗೀಕರಣ : ಪರಿಶಿಷ್ಟ ಪಂಗಡ – ಮಹಿಳಾ ಅಭ್ಯರ್ಥಿ
3. ವಯೋಮಿತಿ ವಿದ್ಯಾರ್ಹತೆ ಮತ್ತು ವೇತನ ಶ್ರೇಣಿ
   - **ವಯೋಮಿತಿ:** ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಂದರೆ ದಿನಾಂಕ:30.04.2010ಕ್ಕೆ ಅಭ್ಯರ್ಥಿಗೆ ಕನಿಷ್ಠ 18 ವರ್ಷ ವಯಸ್ಸಾಗಿರಬೇಕು ಮತ್ತು ಗರಿಷ್ಠ 40 ವರ್ಷ ಮೀರಿರಬಾರದು.
   - **ವಿದ್ಯಾರ್ಹತೆ:** ಕನ್ನಡವನ್ನು ಒಂದು ವಿಷಯವನ್ನಾಗಿ ತೆಗೆದುಕೊಂಡು ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆ ತೇರ್ಗಡೆಯಾಗಿರಬೇಕು ಇದರೊಂದಿಗೆ ಟೆಲಿಕಮ್ಯೂನಿಕೇಷನ್ (ಸೌಂಡ್ ಹಾಗೂ ಟಿ.ವಿ) ನಲ್ಲಿ ಡಿಪ್ಲೋಮೋ
   - **ವೇತನ ಶ್ರೇಣಿ:** ರೂ. 8825–16000

4. ಆಯ್ಕೆ ವಿಧಾನ: ಅಭ್ಯರ್ಥಿಗಳಿಂದ ಅರ್ಜಿಗಳಲ್ಲಿ ಹುದ್ದೆಗೆ ನಿಗದಿಪಡಿಸಿರುವ ಪರೀಕ್ಷೆಯಲ್ಲಿ ಗಳಿಸಿರುವ ಅಂಕಗಳ ಆಧಾರದ ಮೇಲೆ ಅರ್ಹತಾ ಪಟ್ಟಿಯನ್ನು ತಯಾರಿಸಲಾಗುವುದು. ಅರ್ಹತಾ ಪಟ್ಟಿಯನ್ನು ತಯಾರಿಸುವಾಗ ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 13 ಎಸ್‌ಬಿಸಿ 2001 ದಿನಾಂಕ:21.11.01ರನ್ವಯ ಕನಿಷ್ಠ 29 ವಯಸ್ಸಾಗಿರುವ ಹಾಗೂ ಗರಿಷ್ಠ 40 ವರ್ಷ ಮೀರಿರದ ಅಭ್ಯರ್ಥಿಗಳಿಗೆ ಪ್ರಥಮ ಆದ್ಯತೆ ನೀಡಲಾಗುವುದು. 29 ವರ್ಷದಿಂದ 40 ವರ್ಷಗೊಳಗಿನ ಅರ್ಹ ಅಭ್ಯರ್ಥಿಯು ದೊರಕದಿದ್ದಲ್ಲಿ, 18 ವರ್ಷದಿಂದ 29 ವರ್ಷ ವಯಸ್ಸಿನೊಳಗಿನ ಅಭ್ಯರ್ಥಿಗಳನ್ನು ಆಯ್ಕೆಗೆ ಪರಿಗಣಿಸಲಾಗುವುದು.

5. ಲಗತ್ತುಗಳು:

1. ಅರ್ಹತಾ (ಡಿಪ್ಲೋಮ) ಪರೀಕ್ಷೆಯ ಅಂಕಪಟ್ಟಿಯ ನಕಲು ಲಗತ್ತಿಸಿರಬೇಕು.
2. ಜನ್ಮ ದಿನಾಂಕದ ಪ್ರಮಾಣ ಪತ್ರ/ ಎಸ್.ಎಸ್.ಎಲ್.ಸಿ ಅಂಕಪಟ್ಟಿ/ ವರ್ಗಾವಣೆ ಪ್ರಮಾಣ ಪತ್ರದ ನಕಲು ಲಗತ್ತಿಸಬೇಕು.
3. ಪರಿಶಿಷ್ಟ ಪಂಗಡಕ್ಕೆ ಸಂಬಂಧಪಟ್ಟಂತೆ ತಹಶೀಲ್ದಾರ್‌ರವರಿಂದ ಪಡೆದ (ನಿಗದಿತ ನಮೂನೆಯಲ್ಲಿ) ಜಾತಿ ಪ್ರಮಾಣ ಪತ್ರದ ದೃಢೀಕೃತ ನಕಲು ಸಲ್ಲಿಸುವುದು.
4. ಅರ್ಜಿಯಲ್ಲಿ ಫೋಟೋ ಅಂಟಿಸಲು ನಿಗದಿಪಡಿಸಿರುವ ಸ್ಥಳದಲ್ಲಿ ನಿಮ್ಮ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಿ ಅದರ ಮೇಲೆ ಪೂರ್ಣ ಸಹಿ ಮಾಡುವುದು.

- ಈ ಮೇಲೆ ಹೇಳಿದ ಎಲ್ಲಾ ದಾಖಲೆಗಳ ದೃಢೀಕೃತ ಪ್ರತಿ ನೀಡಬೇಕು.

**ಸೂಚನೆಗಳು:**

1. ಅರ್ಜಿಯಲ್ಲಿ ಭರ್ತಿ ಮಾಡಿರುವ ಮಾಹಿತಿ ಮತ್ತು ಅದರೊಂದಿಗೆ ಲಗತ್ತಿಸಿರುವ ಪ್ರಮಾಣ ಪತ್ರಗಳು ಸುಳ್ಳು ಮಾಹಿತಿ ನೀಡಿದ್ದಾಗಿ ನೇಮಕಾತಿಯ ಯಾವುದೇ ಹಂತದಲ್ಲಿ ಕಂಡು ಬಂದಲ್ಲಿ ಅಂತಹ ಅರ್ಜಿಗಳನ್ನು ಪತ್ರ ವ್ಯವಹಾರವಿಲ್ಲದೇ ತಿರಸ್ಕರಿಸಲಾಗುವುದು ಮತ್ತು ಅಂತಹ ಅಭ್ಯರ್ಥಿಗಳ ವಿರುದ್ಧ ಕಾನೂನು ರೀತ್ಯಾ ಕ್ರಮಕೈಗೊಳ್ಳಲು ಉಪಕ್ರಮಿಸಲಾಗುವುದು.

2. ಅಭ್ಯರ್ಥಿಯು ಯಾವುದೇ ಅಪರಾಧ ಮೊಕದ್ದಮೆಯಲ್ಲಿ ಬಂಧನಕ್ಕೆ ಒಳಪಟ್ಟಿರಬಾರದು. ಅಲ್ಲದೆ ಅಪರಾಧ ಮೊಕದ್ದಮೆಯ ತನಿಖೆಗೆ ಒಳಗಾಗಿರಬಾರದು. ಅಪರಾಧ ಪ್ರಕರಣಗಳಲ್ಲಿ ದೋಷಿಯಾಗಿರಬಾರದು. ಒಂದು ವೇಳೆ ಇಂತಹ ಪ್ರಕರಣಗಳಿಗೆ ಒಳಗಾಗಿದ್ದಲ್ಲಿ ಅಂತಹ ಅಭ್ಯರ್ಥಿಯು ನೇಮಕಾತಿಗೆ ಅನರ್ಹರಾಗುತ್ತಾರೆ.
3. ಅಪೂರ್ಣ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
4. ಸುಳ್ಳು ಮಾಹಿತಿ ಅಥವಾ ನಕಲಿ ಪ್ರಮಾಣ ಪತ್ರ/ದಾಖಲಾತಿಗಳನ್ನು ಸಲ್ಲಿಸಿ ನೌಕರಿ ಪಡೆದಿರುವುದು ಯಾವುದೇ ಸಂದರ್ಭದಲ್ಲಿ ಕಂಡು ಬಂದಲ್ಲಿ ಯಾವುದೇ ಮುನ್ಸೂಚನೆ ನೀಡದೇ ನೌಕರಿಯಿಂದ ವಜಾ ಮಾಡುವುದರ ಜೊತೆಗೆ ಅವರ ವಿರುದ್ಧ ಕಾನೂನು ರೀತ್ಯಾ ಕ್ರಮ ತೆಗೆದುಕೊಳ್ಳಲಾಗುವುದು.
5. ಈ ಅಧಿಸೂಚನೆಯೊಂದಿಗೆ ಪ್ರಕಟಿಸಿರುವ ಅರ್ಜಿ ನಮೂನೆಯಂತೆ ಅರ್ಜಿಯನ್ನು ಸಿದ್ಧಪಡಿಸಿ ಸಲ್ಲಿಸಬೇಕಾಗಿರುತ್ತದೆ. ಕಚೇರಿವತಿಯಿಂದ ಅರ್ಜಿ ನಮೂನೆಗಳನ್ನು ನೀಡಲಾಗುವುದಿಲ್ಲ.
6. ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿಗಳನ್ನು ನೊಂದಾಯಿತ ಅಂಚೆ/ ಕೋರಿಯರ್ ಮುಖಾಂತರ ಅಥವಾ ಸ್ವತಃ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರುರವರ ಕಚೇರಿಗೆ ನಿಗದಿತ ದಿನಾಂಕ ಮತ್ತು ಸಮಯದೊಳಗೆ ತಲುಪಿಸಬೇಕು. ತಡವಾಗಿ ಬಂದ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸುವ ಲಕೋಟೆಯ ಮೇಲೆ ಹಿರಿಯ ಎಲೆಕ್ಟ್ರೀಷಿಯನ್ ಕಂ ಸೌಂಡ್ ಸೂಪರ್‌ವೈಸರ್ ಬ್ಯಾಕ್‌ಲಾಗ್ ಹುದ್ದೆಗೆ ಅರ್ಜಿ ಎಂದು ಸ್ಪಷ್ಟವಾಗಿ ನಮೂದಿಸಬೇಕು. ಅರ್ಜಿ ಸ್ವೀಕರಿಸಿದ್ದಕ್ಕೆ ಸಂಬಂಧಪಟ್ಟವರಿಂದ ದಿನಾಂಕ: ಮತ್ತು ಸಹಿ ಪಡೆದುಕೊಳ್ಳಬಹುದಾಗಿದೆ.
7. ಸಲ್ಲಿಸಲಾಗುವ ಯಾವುದೇ ದಾಖಲೆಗಳನ್ನು ಹಿಂದಿರುಗಿಸಲಾಗುವುದಿಲ್ಲ. ಈ ಕುರಿತು ಯಾವುದೇ ಪತ್ರ ವ್ಯವಹಾರಕ್ಕೆ ಅವಕಾಶ ಇರುವುದಿಲ್ಲ.

ನಿರ್ದೇಶಕರು

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**

**ಹಿರಿಯ ಎಲೆಕ್ಟ್ರೀಷಿಯನ್ ಕಂ ಸೌಂಡ್ ಸೂಪರ್ ವೈಸರ್ ಹುದ್ದೆಗೆ ಅರ್ಜಿ**

ಅರ್ಜಿ ಸಂಖ್ಯೆ:

| |
|---|
| ನಿಮ್ಮ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಿ ಅದರ ಮೇಲೆ ಸಹಿ ಮಾಡುವುದು |

ಗೆ:
ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು–560 002

1) ಅಭ್ಯರ್ಥಿಯ ಹೆಸರು :
2) ತಂದೆಯ ಹೆಸರು :
3) ಅಭ್ಯರ್ಥಿಯ ಅಂಚೆ ವಿಳಾಸ :
4) ವಿದ್ಯಾರ್ಹತೆ :

| ಕ್ರ. ಸಂ. | ಡಿಪ್ಲೊಮಾ (ಟೆಲಿಕಮ್ಯೂನಿಕೇಷನ್) ಸೌಂಡ್ ಹಾಗೂ ಟಿ.ವಿ | ಗರಿಷ್ಠ ಅಂಕಗಳು | ಗಳಿಸಿದ ಅಂಕಗಳು | ಶೇಕಡಾವಾರು |
|---|---|---|---|---|
| | | | | |

5) ಹುಟ್ಟಿದ ದಿನಾಂಕ :
6) ಲಗತ್ತುಗಳು

1. ಎಸ್.ಎಸ್.ಎಲ್.ಸಿ ಅಂಕಪಟ್ಟಿಯ ದೃಢೀಕೃತ ಪ್ರತಿ
2. ಜಾತಿ ಪ್ರಮಾಣ ಪತ್ರದ ದೃಢೀಕೃತ ಪ್ರತಿ
3. ಅರ್ಹತಾ (Qualifying) ಪರೀಕ್ಷೆಯ ಅಂದರೆ ಡಿಪ್ಲೋಮಾ ಅಂಕಪಟ್ಟಿಯ ದೃಢೀಕೃತ ನಕಲುಗಳು

**ಸೂಚನೆ:** ಅಧಿಸೂಚನೆಯಲ್ಲಿ ಸೂಚಿಸಿರುವ ಎಲ್ಲಾ ಸೂಚನೆಗಳಂತೆ ಅರ್ಜಿ ಸಲ್ಲಿಸದಿದ್ದಲ್ಲಿ ಅರ್ಜಿಯನ್ನು ತಿರಸ್ಕರಿಸಲಾಗುವುದು.

**ಘೋಷಣೆ**

ಮೇಲೆ ಹೇಳಿದ ವಿವರಗಳು ನನಗೆ ತಿಳಿದ ಮಟ್ಟಿಗೆ ಮತ್ತು ನಾನು ನಂಬುವಷ್ಟರ ಮಟ್ಟಿಗೆ ನಿಜವೆಂದು ಈ ಮೂಲಕ ಘೋಷಿಸುತ್ತೇನೆ. ಯಾವುದೇ ಮಾಹಿತಿಯ, ನೇಮಕಾತಿ ಮುಂಚೆ ಅಥವಾ ತರುವಾಯ ಸುಳ್ಳು ಅಥವಾ ತಪ್ಪೆಂದು ಕಂಡು ಬಂದ ಸಂದರ್ಭದಲ್ಲಿ ಅಥವಾ ಅನರ್ಹತೆ ಪತ್ತೆ ಆದ ಸಂದರ್ಭದಲ್ಲಿ ನೇಮಕಾತಿ ಸಮಿತಿಯು ನನ್ನ ವಿರುದ್ಧ ಕ್ರಮ ಕೈಗೊಳ್ಳಬಹುದಾಗಿದೆ ಎಂದು ನನಗೆ ತಿಳಿದಿರುತ್ತದೆ.

ನಾನು ಅಧಿಸೂಚನೆಯ ನಿಯಮಗಳನ್ನು ಜಾಗರೂಕತೆಯಿಂದ ಓದಿರುತ್ತೇನೆ. ಮತ್ತು ಅವುಗಳಿಗೆ ಬದ್ಧನಾಗಿರುತ್ತೇನೆ. ನಾನು ಅರ್ಜಿ ಸಲ್ಲಿಸಿದ ಹುದ್ದೆಯ ನೇಮಕಾತಿಗೆ ನಿಗದಿಪಡಿಸಿದ ವಯೋಮಿತಿ ವಿದ್ಯಾರ್ಹತೆ ಮುಂತಾದ ಅರ್ಹತೆಯ ಎಲ್ಲಾ ಷರತ್ತುಗಳನ್ನು ಪೂರೈಸುವುದಾಗಿಯೂ ಮತ್ತು ಇದೇ ಬಗೆಯ ಯಾವುದೇ ಪರೀಕ್ಷೆಗೆ ಹಾಜರಾಗದಂತೆ ನಾನು ಪರೀಕ್ಷೆಯಿಂದ ಉಚ್ಚಾಟಿಸಲ್ಪಟ್ಟಿಲ್ಲವೆಂದು ಸಹ ಘೋಷಿಸುತ್ತೇನೆ.

ಸ್ಥಳ:

ಅಭ್ಯರ್ಥಿಯ ಪೂರ್ಣ ಸಹಿ

ದಿನಾಂಕ:

ಪಿ.ಆರ್. 204 ಪರಿಶೀಲಿಸಿದ ಅಧಿಕಾರಿಯ ಸಹಿ ಮತ್ತು ಹೆಸರು

**ಪೊಲೀಸ್ ಇಲಾಖೆ**

**ಉಪ ಪೊಲೀಸ್ ಕಮೀಷನರ್ ರವರ ಕಛೇರಿ ಸಿ.ಎ.ಆರ್. ಕೇಂದ್ರ ಘಟಕ, ಮೈಸೂರು ರಸ್ತೆ, ಬೆಂಗಳೂರು–18**

**ಅಧಿಸೂಚನೆ**

**ಸಂಖ್ಯೆ:ಎಂಟಿಸಿ(1)/14/2007–08, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2010**

**ವಿಷಯ:** ಸಿ.ಎ.ಆರ್. ಕೇಂದ್ರ ಘಟಕದ ವಾಹನ ವಿಭಾಗದಲ್ಲಿ ಸಂಗ್ರಹವಾಗಿರುವ ನಿರುಪಯುಕ್ತ ಬಿಡಿಭಾಗಗಳು ಟೈರುಗಳು, ಟ್ಯೂಬು + ಫ್ಲಾಪ್ಸ್, ಸುಟ್ಟ ತೈಲ ಮತ್ತು ಖಾಲಿ ತೈಲದ ಬ್ಯಾರಲ್ (ಡ್ರಮ್)ಗಳನ್ನು ಟೆಂಡರ್/ಬಹಿರಂಗ ಹರಾಜಿನ ಮೂಲಕ ಸಾರ್ವಜನಿಕರಿಗೆ ವಿಲೇವಾರಿ ಮಾಡುವ ಸಂಬಂಧ ಪ್ರಕಟಣೆ.

**ಉಲ್ಲೇಖ:** 1. ಎಪಿಸಿ, ವಾಹನ ವಿಭಾಗ ರವರ ವರದಿ ಸಂಖ್ಯೆ: ಎಂಟಿಎಸ್(1)/471/2009, ದಿನಾಂಕ:03.03.2010.
2. ಪೊಲೀಸ್ ಕಮೀಷನರ್, ಬೆಂಗಳೂರು ನಗರ ರವರ ಕಛೇರಿ ಆದೇಶ ಸಂಖ್ಯೆ:ಲೆಕ್ಕ (6)/443/ಎಂಟಿ/2009–10 ದಿನಾಂಕ:28.01.2010.

ಮೇಲಿನ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಸಿ.ಎ.ಆರ್. ಕೇಂದ್ರ ಘಟಕ, ಮೈಸೂರು ರಸ್ತೆ, ಬೆಂಗಳೂರು ನಗರ ಘಟಕದಲ್ಲಿನ ವಾಹನ ವಿಭಾಗದಲ್ಲಿ ದಿನಾಂಕ:01.04.2008 ರಿಂದ 31.03.2009 ರವರೆಗಿನ ಅವಧಿಯಲ್ಲಿ ಸಂಗ್ರಹವಾಗಿರುವ ಪೊಲೀಸ್ ವಾಹನಗಳಿಂದ ಬೇರ್ಪಡಿಸಲಾದ ನಿರುಪಯುಕ್ತ ಹಳೆಯ ಬಿಡಿಭಾಗಗಳು, ಟೈರುಗಳು, ಟ್ಯೂಬ್‌ಗಳು + ಫ್ಲಾಪ್ಸ್, ಸುಟ್ಟ ಇಂಜಿನ ತೈಲ ಮತ್ತು ಖಾಲಿ ತೈಲದ ಬ್ಯಾರಲ್‌ಗಳನ್ನು (ಡ್ರಮ್‌ಗಳು) ಸಾರ್ವಜನಿಕರಿಗೆ ವಿಲೇವಾರಿ ಮಾಡಲು ದಿನಾಂಕ:28.04.2010ರ ಬುಧವಾರ ಬೆಳಿಗ್ಗೆ 10.30 ಗಂಟೆಗೆ ಸರಿಯಾಗಿ ಈ ಕಛೇರಿಯ ವಾಹನ ವಿಭಾಗ ಆವರಣದಲ್ಲಿ ಟೆಂಡರ್/ಬಹಿರಂಗ ಹರಾಜನ್ನು ಏರ್ಪಡಿಸಲಾಗಿರುತ್ತದೆ. ಇಚ್ಚೆವುಳ್ಳ ಬಿಡ್ಡುದಾರರು ಸದರಿ ಹರಾಜಿನಲ್ಲಿ ಭಾಗವಹಿಸುವ ಮೂಲಕ ಅಥವಾ ಟೆಂಡರ್‌ಗಳನ್ನು ಸಲ್ಲಿಸುವುದರ ಮೂಲಕ ನಿರುಪಯುಕ್ತ ವಸ್ತುಗಳನ್ನು ಪಡೆಯಬಹುದಾಗಿರುತ್ತದೆ.

**ಹರಾಜು ಮಾಡಲು ಉದ್ದೇಶಿಸಿರುವ ನಿರುಪಯುಕ್ತ ವಸ್ತುಗಳ ವಿವರಣಾ ಪಟ್ಟಿ**

| | | |
|---|---|---|
| 1 | ಹಳೆಯ ಬಿಡಿಭಾಗಗಳು | 850 ಕೆ.ಜಿ. (ಪ್ರತಿ ಕೆ.ಜಿ. ಲೆಕ್ಕದಲ್ಲಿ ವಿಲೇವಾರಿ ಮಾಡಲಾಗುವುದು) |
| 2 | ಟೈರುಗಳು | 106 ಸಂಖ್ಯೆ (ಲಾಟ್ ಮೂಲಕ ವಿಲೇವಾರಿ) |
| 3 | ಟ್ಯೂಬುಗಳು + ಫ್ಲಾಪ್ಸ್ | 102 ಸಂಖ್ಯೆ (ಲಾಟ್ ಮೂಲಕ ವಿಲೇವಾರಿ) |
| 4 | ಸುಟ್ಟ ಇಂಜಿನ್ ತೈಲ | 2,200 ಲೀ (ಪ್ರತಿ ಲೀಟರ್ ಲೆಕ್ಕದಲ್ಲಿ ಮಾರಾಟ ಮಾಡಲಾಗುವುದು) |
| 5 | ಖಾಲಿ ತೈಲದ ಬ್ಯಾರಲ್‌ಗಳು (ಡ್ರಮ್‌ಗಳು) | 42 ಸಂಖ್ಯೆ (ಪ್ರತಿಯೊಂದು ಡ್ರಮ್ಮಿನ ಲೆಕ್ಕದಲ್ಲಿ ಮಾರಾಟ) |

ಉಪ ಪೊಲೀಸ್ ಕಮೀಷನರ್,

ಪಿ.ಆರ್. 205 ಸಿ.ಎ.ಆರ್. ಕೇಂದ್ರ ಘಟಕ, ಬೆಂಗಳೂರು

**IN THE COURT OF THE IV ADDL.CITY CIVIL JUDGE, MAYOHALL, BANGALORE CCH-21**

**P & S.C.No.25036/2009, HG:16/04/2010**

**PLAINTIFF:**

1. MR. Padam Jagannath Sanjeevnath 39 yrs No.2C, 316, 3rd Block, HRBR Layout Off Nilgiris Kamanahalli Main Road, Bangalore
2. MR. Padam Jagannath Deepaknath 37 yrs Flat No.3, Ground Floor Varsha Apartments No.116, 3rd Main Defence Colony Indiranagar, Bangalore-38

**V/s**

**RESPONDENT:** NIL

**PUBLIC NOTICE**

Notice is hereby given that a petition has been made to this Court Under Sec 372 the Indian Succession Act, for grant of Succession Certificate in respect of the amounts of the deceased Pushpa Jagannath who died on 22/09/08.

Be it known that No caveat has been entered and the said petition is posted for hearing on 16/04/2010 at 11'O clock. Any person's claiming to have any interest may come and participate in the proceedings before grant of Succession Certificate.

**SCHEDULE**

1. Locker bearing No.62, Central Bank of India, Commercial Street Branch, Bangalore.
2. Karnataka Bangalore Infantry Road A/c No.1887 Rs.2,22,590.63.
3. Karnataka Bank Infantry Road A/c No.1615 Rs. 87,414.99
4. State Bank of India Museum Road A/c No.01190022549 Rs.2,733.76

Given under my hand and the seal of the Court, this the 12th day of March 2010.

By Order of the Court,

P.D. 46

Assistant Registrar

City Civil Court, Mayohall Unit, Bangalore

**IN THE COURT OF THE IV ADDL.CITY CIVIL JUDGE, MAYOHALL, BANGALORE CCH-21**

**P & S.C.No.25008/2010, HG:03/04/2010**

**PLAINTIFF:**

1. Smt Lakshmi Devi W/o Late H. Narendra 57 yrs
2. N. Srinath S/o late H. Narendra 34 yrs
3. N. Manjunath s/o Late H. Narendra 32 yrs
4. Smt N. Divya D/o late H. Narendra 28 yrs 2 to 4 are represented by their GPA Holder smt Lakshmi Devi No.1 supra and N.Manjunath Sl.No. 3 supra presently all at No.43 Kalhally Bangalore-42

**V/s**

**RESPONDENT:**

1. Smt Saroja W/o Late H.V. Venkataraman 71 yrs R/at No.58, Charles Campbell Road, Cox Town, Bangalore-5.
2. Smt Susheela W/o R. Narasimiah 70 yrs R/at No.42 Kalhally Bangalore-42
3. Smt Neela Mahadevan @ Neela P.m w/o late B.P. Mahadevan 63 yrs R/at No.4/2 Sulthanpalya, R.T.Nagar, Bangalore-32

4. Smt Jayanthi W/o Dr.C.Rajgopal 47 yrs R/at No.178 Talakaverinagar, 7th Cross, Vibuthipura, Bangalore.
5. Smt Hemalatha W/o V. Srinivasan 43 yrs R/at No.711/1 Hoovadigara Beedhi Behing Old Janatha Bazar, Yelahanka Bangalore-44

**PUBLIC NOTICE**

Notice is hereby given that a petition has been made to this Court Under Sec 372 the Indian Succession Act, for grant of Succession Certificate in respect of the amount of the deceased H. Narendra who died on 11/08/07.

Be it known that No caveat has been entered and the said petition is posted for hearing on 03/04/2010 at 11'O clock. Any person's claiming to have any interest may come and participate in the proceedings before grant of Succession Certificate.

**SCHEDULE**

Amount Deposited in the Courts.

Amount due from the Indian Telephone Industries Housing Co-operative society

Given under my hand and the seal of the Court, this the 6th day of March 2010.

By Order of the Court,

P.D. 47

Assistant Registrar

City Civil Court, Mayohall Unit, Bangalore

**IN THE COURT OF THE IV ADDL.CITY CIVIL JUDGE, MAYOHALL, BANGALORE CCH-21**

**P & S.C.No.25011/2010, HG:9/4/2010**

**PETITIONER:**

1. Smt Sunitha .B W/o Late M. Naveen 33 yrs
2. Master Rohan.N S/o Late M.Naveen, Aged Minor
3. Kumari Niharika.N D/o Late M.Naveen, Aged Minor, Petitioner No.2 & 3 since minor is irepresented by their natural legal guardian and next firend their mother Smt Sunitha i.e.petitioner No.1
4. Sri M. Manjunath S/o Late Maralusiddappa, Aged about 65 years.
5. Smt Savitha Manjunatha W/o M. Manjunath, Aged about 56 years, All the petitioners No.1 to 5 are R/at No.22, 3rd Stage, 3rd Phase, 5th Block, Banashankari 3rd Stage, Bangalore-560 085
6. Smt Rashmi.M W/o Omkar Bilki, D/o M.Manjunath, Aged about 28 years, Residing at No.103, Gana Residency, Yelachenahalli, Kanakapura Main Road, Bangalore.

**V/s**

**RESPONDENT:** NIL

**PUBLIC NOTICE**

Notice is hereby given that a petition has been made to this Court Under Sec 372 of the Indian Succession Act, for grant of Succession Certificate in respect of amount of the deceased late M. Naveen who died on 28-10-2009 at Bangalore.

Be it known that No caveat has been entered and the said petition is posted for hearing on 09/04/2010 at 11'O clock. Any person's claiming to have any interest may come and participate in the proceedings before grant of Succession Certificate to the petitioners.

**SCHEDULE**

a. S.B. A/c No 04300040000118 for a sum of Rs.8,42,504.24/-

b. Term Deposit A/c No.04303630000419, Sum of Rs.1,00,000/-

c. Term Deposit A/c No.04303630000446, sum of Rs.1,00,000/-

d. Term Deposit A/c No.04303630000450, sum of Rs.1,00,000/-

e. Term Deposit A/c No.04303630000423, sum of Rs.1,00,000/-

f. Term Deposit A/c No.04303630000432, sum of Rs.1,00,000/-

2. Karnataka Bangalore Infantry Road A/c No.1887 Rs.2,22,590.63.

At Kotak Mahindra Bank,

S.B.A/c No.413546020 of Rs.18,235/- at Indian Bank.

Given under my hand and the seal of the Court, this the 1st day of March 2010.

By Order of the Court,

P.D. 48

Assistant Registrar

City Civil Court, Mayohall Unit, Bangalore

**IN THE COURT OF THE IV ADDL.CITY CIVIL JUDGE, MAYOHALL, BANGALORE CCH-21**

**P & S.C.No.25010/2010, HG:9/4/2010**

**PETITIONER:**

Mr Rajesh Mascarenhas S/o Mr. Mathew John Mascarenhas residing at 2209, Miramar Court, Buffalo Grove, IL 6089 U.S.A presently residing at No. 103, Gayathri Devi Park Extension, Vyalikaval, Bangalore-560003

**V/s**

**RESPONDENT:** NIL

**PUBLIC NOTICE**

Notice is hereby given that a petition has been made to this Court Under Sec 276, of the Indian Succession Act, for grant of Probate in respect of the Will of the deceased late Sri Mr. Mathew John Mascarenhas who died on 31/10/2009.

Be it known that No caveat has been entered and the said petition is posted for hearing on 09/04/2010 at 11'O clock. Any person's claiming to have any interest may come and participate in the proceedings before grant of probate to the petitioners.

**SCHEDULE**

1. Ground Floor property bearing No.103, (Old Site No.100) Gayathri Devi Park Extension, Bangalore-560003, with 50% share in the land.
2. Agricultural land in Survey No.49-31 CT of Antady Village Bantwal Taluk, South Canara District.
3. Site No.288 measuring 386.44 Sq.yds Situated in the layout formed by Forest Officers Co-operative Housing Society Ltd. In Survey No.21 of Kenchanahalli, Bangalore South Taluk.

Given under my hand and the seal of the Court, this the 1st day of March 2010.

By Order of the Court,

P.D. 49

Assistant Registrar

City Civil Court, Mayohall Unit, Bangalore

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

### ಜಿಲ್ಲಾ ನೋಂದಣಾಧಿಕಾರಿಗಳು, ಮಡಿಕೇರಿ, ಕೊಡಗು ಜಿಲ್ಲೆ, ಇವರ ನಡವಳಿಗಳು

**ವಿಷಯ:** ಕೊಡಗು ಜಿಲ್ಲೆಯಲ್ಲಿನ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕಗೊಂಡ ಶ್ರೀ ಶಿದ್ದಾರೂಡ ಬಿನ್ ಭೀಮಪ್ಪ ದೇವರಮನಿ C/o R. ಶಿವಣ್ಣರೆಡ್ಡಿ, ಪಿತೃಛಾಯನಿಲಯ, 10ನೇ ಕ್ರಾಸ್, ಕಲ್ಯಾಣ ನಗರ ಧಾರವಾಡ ಇವರ ನೇಮಕಾತಿ ಆದೇಶವನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: DPAR 13 SBC 2001 ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
2. ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರ ರೀ–ಅಲಾಟ್‌ಮೆಂಟ್ ಆದೇಶ ಸಂಖ್ಯೆ: EST 1-274/01-02 ದಿನಾಂಕ: 31.7.2009.
3. ಈ ಕಛೇರಿಯ ನೇಮಕಾತಿ ಆದೇಶ ಸಂಖ್ಯೆ: ಸಿಬ್ಬಂದಿ ಸಿಆರ್ 17/2009–10 ದಿನಾಂಕ: 6.8.2009.
4. ಸದರಿ ಶಿದ್ದಾರೂಢ ಧಾರವಾಡ ಇವರು ದಿನಾಂಕ: 20.08.2009 ರಂದು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರಿಗೆ ಮನವಿ ಸಲ್ಲಿಸಿ ಅದರ ಪ್ರತಿಯನ್ನು ಈ ಕಛೇರಿಗೆ ಸಲ್ಲಿಸಿರುವುದು.
5. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಸದರಿ ಶಿದ್ದಾರೂಢ ಇವರಿಗೆ ದಿನಾಂಕ:29.08.2009 ರಂದು ನೀಡಿರುವ ಹಿಂಬರಹ ಹಾಗೂ ಅದರ ಪ್ರತಿಯನ್ನು ಈ ಕಛೇರಿಗೆ ಕಳುಹಿಸಿರುವುದು.

**ಪ್ರಸ್ತಾವನೆ:**

ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು ಇವರು ಉಲ್ಲೇಖ (2)ರ ಅವರ ರೀ–ಅಲಾಟ್‌ಮೆಂಟ್ ಆರ್ಡರ್‌ನಲ್ಲಿ ಕೆಳಕಂಡ ಅಭ್ಯರ್ಥಿಯನ್ನು ಈ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಬೆರಳಚ್ಚುಗಾರರೆಂದು ನೇಮಕಾತಿ ಮಾಡಿಕೊಳ್ಳುವುದಕ್ಕಾಗಿ, ಅಲಾಟ್ ಮಾಡಿದ್ದರ ಮೇರೆ, ಕೆಳಕಂಡ ಅಭ್ಯರ್ಥಿಯನ್ನು ಉಲ್ಲೇಖ (3) ರ ಈ ಕಛೇರಿಯ ಆದೇಶದಲ್ಲಿ ಬೆರಳಚ್ಚುಗಾರರೆಂದು ನೇಮಕ ಮಾಡಿ ಅದೇ ಆದೇಶದಲ್ಲಿ ಕೆಳಕಂಡ ಅಭ್ಯರ್ಥಿಯನ್ನು ಅವರ ಹೆಸರಿನ ಮುಂದೆ ಸೂಚಿಸಿದ ಕಛೇರಿಗೆ ಸ್ಥಳ ನಿಯುಕ್ತಿ ಮಾಡಿ ಸದರಿ ನೇಮಕಾತಿ ಆದೇಶವು ಮುಟ್ಟಿದ ದಿನಾಂಕದಿಂದ ಹದಿನೈದು (15) ದಿನಗಳೊಳಗೆ ನೇಮಕಾತಿ ಮಾಡಿದ ಕಛೇರಿಯಲ್ಲಿ ತಪ್ಪದೇ ಕೆಲಸಕ್ಕೆ ಹಾಜರಾಗುವಂತೆ ಸದರಿ ಅಭ್ಯರ್ಥಿಗೆ ಸೂಚಿಸಿ, ಉಲ್ಲೇಖ (3) ಸದರಿ ನೇಮಕಾತಿ ಆದೇಶವನ್ನು RPAD ಮೂಲಕ ಕೆಳಕಂಡ ಸದರಿ ಅಭ್ಯರ್ಥಿಗೆ ಕಳುಹಿಸಲಾಗಿತ್ತು.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | SC/ST | ಅಭ್ಯರ್ಥಿಯನ್ನು ಬೆರಳಚ್ಚುಗಾರರೆಂದು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ | ವರ್ಗೀಕರಣ |
|---|---|---|---|---|
| 1. | ಶ್ರೀ ಶಿದ್ದಾರೂಢ ಬಿನ್ ಭೀಮಪ್ಪ ದೇವರಮನಿ C/o R ಶಿವಣ್ಣರೆಡ್ಡಿ, ಪಿತೃಛಾಯ ನಿಲಯ, 10ನೇ ಕ್ರಾಸ್ ಕಲ್ಯಾಣನಗರ, ಧಾರವಾಡ–07 | SC | ಜಿಲ್ಲಾ ನೋಂದಣಿ ಕಛೇರಿ, ಮಡಿಕೇರಿ ಕೊಡಗು ಜಿಲ್ಲೆ | ಪರಿಶಿಷ್ಟ ಜಾತಿ ಗ್ರಾಮೀಣ ಅಭ್ಯರ್ಥಿ ಹೆಚ್ಚುವರಿ ಪಟ್ಟಿ |

ಮೇಲ್ಕಂಡ ಅಭ್ಯರ್ಥಿಯು ಈ ಕಛೇರಿಯ ದಿನಾಂಕ:6.8.2009ರ ಉಲ್ಲೇಖ (3) ರ ನೇಮಕಾತಿ ಆದೇಶವನ್ನು ದಿನಾಂಕ: 8.8.2009 ರಂದು ಸ್ವೀಕರಿಸಿರುವುದಾಗಿ ಉಲ್ಲೇಖ (4)ರ ಅವರ ಮನವಿಯಲ್ಲಿ ತಿಳಿಸುತ್ತಾ ಕೊಡಗು ಜಿಲ್ಲೆಯ ಹವಾಮಾನ, ನೀರು, ಆಹಾರ ಮತ್ತು ಹೆಚ್ಚು ಮಳೆ ಚಳಿ ಇರುವುದರಿಂದ ತಮ್ಮ ಚಿಕ್ಕ ಮಕ್ಕಳಿಗೆ ಮತ್ತು ತಮ್ಮ ಕುಟುಂಬಕ್ಕೆ ಇದು ಹೊಂದುವುದಿಲ್ಲವಾದ್ದರಿಂದ ಕೊಡಗು ಜಿಲ್ಲೆಯನ್ನು ಬಿಟ್ಟು ಉತ್ತರ ಕರ್ನಾಟಕದ ಭಾಗವಾದ ವಿಜಾಪುರ ಗುಲ್ಬರ್ಗ, ಬೀದರ್, ಧಾರವಾಡ ಹಾಗೂ ರಾಯಚೂರು ಜಿಲ್ಲೆಗಳಲ್ಲಿ ಯಾವುದಾದರೂ ಜಿಲ್ಲೆಗೆ ತಮ್ಮನ್ನು ನೇಮಕ ಮಾಡುವಂತೆ ಉಲ್ಲೇಖ (4) ಮನವಿಯಲ್ಲಿ ಸದರಿ ಅಭ್ಯರ್ಥಿಯು ವಿನಂತಿಸಿದ್ದರ ಮೇರೆ, ಗುಲ್ಬರ್ಗ ಜಿಲ್ಲೆಗೆ ಈಗಾಗಲೇ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ನಿಯಮಾನುಸಾರ ಬೆರಳಚ್ಚುಗಾರರೆಂದು ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕ ಮಾಡಿರುವುದರಿಂದ ಗುಲ್ಬರ್ಗ ಜಿಲ್ಲೆಯಲ್ಲಿ ಯಾವುದೇ ಬ್ಯಾಕ್‌ಲಾಗ್ ಹುದ್ದೆಗಳು ಖಾಲಿ ಇರುವುದಿಲ್ಲವೆಂದು ಉಳಿದ ಮೇಲ್ಕಂಡ ಜಿಲ್ಲೆಗಳಲ್ಲಿ ಯಾವುದೇ ಬ್ಯಾಕ್‌ಲಾಗ್ ಹುದ್ದೆಗಳನ್ನು ಈ ಇಲಾಖೆಯ ಬೆರಳಚ್ಚುಗಾರರ ವೃಂದದಲ್ಲಿ ಗುರ್ತಿಸಿರುವುದಿಲ್ಲವಾದ್ದರಿಂದ ನಿಯಮಾನುಸಾರ ಸದರಿ ಜಿಲ್ಲೆಗಳಿಗೆ

ನೇಮಕಾತಿ ನೀಡಲು ಬರುವುದಿಲ್ಲವಾದ್ದರಿಂದ ಈ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನಿಮ್ಮನ್ನು ಬೆರಳಚ್ಚುಗಾರರೆಂದು ನೇಮಕ ಮಾಡಿರುವ ಕೊಡಗು ಜಿಲ್ಲೆಯಲ್ಲಿನ ಜಿಲ್ಲಾ ನೋಂದಣಿ ಕಛೇರಿ ಮಡಿಕೇರಿ ಇಲ್ಲಿ ತಕ್ಷಣವೇ ತಪ್ಪದೇ ಕೆಲಸಕ್ಕೆ ಹಾಜರಾಗುವಂತೆ ಸದರಿ ಶ್ರೀ ಶಿದ್ದಾರೂಢ ಇವರಿಗೆ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರು ಬೆಂಗಳೂರು ಇವರು ಉಲ್ಲೇಖ (5) ರನ್ವಯ ಹಿಂಬರಹ ನೀಡಿ ಅದರ ಪ್ರತಿಯನ್ನು ಈ ಕಛೇರಿಗೆ ಕಳುಹಿಸಿರುತ್ತಾರೆ.

ಸದರಿ ಉಲ್ಲೇಖ (5)ರ ಹಿಂಬರಹದನ್ವಯ ಸದರಿ ಅಭ್ಯರ್ಥಿಯು ಅವರನ್ನು ನೇಮಕ ಮಾಡಿದ ಮೇಲ್ಕಂಡ ಕಛೇರಿಯಲ್ಲಿ ಈ ತಹಲ್‌ವರೆವಿಗೂ ಕೆಲಸಕ್ಕೆ ಹಾಜರಾಗಿರುವುದಿಲ್ಲ. ಕೆಲಸಕ್ಕೆ ಹಾಜರಾಗಲು ಇವರಿಗೆ ನೀಡಿದ ಕಾಲಾವಕಾಶವು ಈಗಾಗಲೇ ಮುಕ್ತಾಯವಾಗಿರುತ್ತದೆ. ಆದ್ದರಿಂದ ಮೇಲ್ಕಂಡ ಅಭ್ಯರ್ಥಿಯು ನೇಮಕಾತಿಯನ್ನು ರದ್ದುಪಡಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಸಿಬ್ಬಂದಿ:ಸಿ.ಆರ್:17/2009–10, ದಿನಾಂಕ: 10ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (1)ರ ಅಧಿಸೂಚನೆ ಅನ್ವಯ ಹಾಗೂ 1977ರ ಕೆ.ಸಿ.ಎಸ್ (ಸಾಮಾನ್ಯ ನೇಮಕಾತಿ) ನಿಯಮಗಳಲ್ಲಿನ 18 (3)ನೇ ನಿಯಮದನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಮೇಲ್ಕಂಡ ಅಭ್ಯರ್ಥಿಯಾದ ಶ್ರೀ ಸಿದ್ದಾರೂಡ ಬಿನ್ ಭೀಮಪ್ಪ ದೇವರಮನಿ C/o R. ಶಿವಣ್ಣರೆಡ್ಡಿ, ಪಿತೃಛಾಯ ನಿಲಯ, 10ನೇ ಕ್ರಾಸ್ ಕಲ್ಯಾಣನಗರ, ಧಾರವಾಡ ಇವರನ್ನು ಈ ಇಲಾಖೆಯಲ್ಲಿನ ಈ ಜಿಲ್ಲೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಬೆರಳಚ್ಚುಗಾರರೆಂದು ನೇಮಕ ಮಾಡಿದ ದಿನಾಂಕ:6.8.2009ರ ಈ ಕಛೇರಿಯ ಉಲ್ಲೇಖ (3) ರ ನೇಮಕಾತಿ ಆದೇಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಮೇಲ್ಕಂಡ ಅಭ್ಯರ್ಥಿಯು ಈ ತಕ್ಷಣದಿಂದ ಈ ಇಲಾಖೆಯಲ್ಲಿನ ಈ ಜಿಲ್ಲೆಯ ಬೆರಳಚ್ಚುಗಾರರ ಹುದ್ದೆಯ ನೇಮಕಾತಿ ಹಕ್ಕನ್ನು ಕಳೆದುಕೊಂಡಿರುವರೆಂದು ಹಾಗೂ ಬೆರಳಚ್ಚುಗಾರರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಹಾಗೂ ಸದರಿಯವರು ಬೆರಳಚ್ಚುಗಾರರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

ನೇಮಕಾತಿ ಪ್ರಾಧಿಕಾರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳು,

ಪಿ.ಆರ್. 198 ಮಡಿಕೇರಿ, ಕೊಡಗು ಜಿಲ್ಲೆ.

**[ನಮೂನೆ–1]**

**9ನೇ ನಿಯಮ ನೋಡಿ**

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ**

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು–9**

**ಅಧಿಸೂಚನೆ**

**ಸಂಖ್ಯೆ: ಎಎನ್‌ಎಂ (1)298:08–09, ದಿನಾಂಕ: 19ನೇ ಫೆಬ್ರವರಿ 2010**

ಶ್ರೀಮತಿ **ಹೆಚ್.ಆರ್. ಕಾಂತಮ್ಮ,** ರವರು ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯಾಗಿ ಪ್ರಾಥಮಿಕ ಆರೋಗ್ಯ ಕೇಂದ್ರ, ಚಾಮರಹಳ್ಳಿ: ಅಮನಲ್ಲೂರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದು ಇವರ ಹೆಸರನ್ನು **ಕಾಂತಪ್ರಿಯ .ಆರ್** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ

ಪಿ.ಡಿ. 39 ನೇಮಕಾತಿಯವರ ಸಹಿ ಮತ್ತು ಪದನಾಮ

**[ನಮೂನೆ–1]**

**9ನೇ ನಿಯಮ ನೋಡಿ**

**ಪೊಲೀಸ್ ಇಲಾಖೆ**

**ಪೊಲೀಸ್ ಆಯುಕ್ತರ ಕಛೇರಿ, ಹುಬ್ಬಳ್ಳಿ–ಧಾರವಾಡ**

**ಅಧಿಸೂಚನೆ**

ಶ್ರೀ **ಏಗಪ್ಪ ತಂದೆ ಗಂಗಪ್ಪ ಲದ್ದಿ,** ಎಹೆಚ್‌ಸಿ–115, ನಗರ ಸಶಸ್ತ್ರ ಮೀಸಲು ಪಡೆ, ಹುಬ್ಬಳ್ಳಿ–ಧಾರವಾಡ ಇಲ್ಲಿ ನಗರ ಸಶಸ್ತ್ರ ಮುಖ್ಯ ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕೆಲಸ ನಿರ್ವಹಿಸುತ್ತಿದ್ದು ಇವರ ಹೆಸರನ್ನು ಶ್ರೀ **ಯೋಗೇಶ ತಂದೆ ಗಂಗಪ್ಪ ಲದ್ದಿಯವರ** ಎಂದು ಬದಲಾಯಿಸಿ ಕೊಳ್ಳಲು ಅನುಮತಿ ನೀಡಲಾಗಿದೆ.

ಪಿ.ಡಿ. 40 ಪೊಲೀಸ್ ಕಮೀಷನರ್, ಹುಬ್ಬಳ್ಳಿ–ಧಾರವಾಡ